This Page is available for Advertisement. Rate Rs. 15/- [per insertion.]

# ANTARANGA

**KANARESE WEEKLY MAGAZINE**

PROPRIETORS:
SUPPLY AGNCY LIMITED, UDIPI.
PRINTED AT THE
MANIPAL POWER PRESS, UDIPI.

# ಅಂತರಂಗ

ಕನ್ನಡ ವಾರ ಪತ್ರಿಕೆ - - ಉಡುಪಿ

ವರ್ಷ ೧ ] ✠ [ ಸಂಚಿಕೆ ೨೫

ಆದಿತ್ಯವಾರ, ಜನವರಿ ೧, -'೪೯.





**ವಾರ್ಷಿಕ ಚಂದಾ: ಮೂರು ರೂಪಾಯಿ.**
**ಬಿಡಿ ಸಂಚಿಕೆ: ಒಂದಾಣೆ**

**ವಿ. ಪಿ. ಕ್ರಮವಿಲ್ಲ. ಹಣವನ್ನು ಮುಂಗಡವಾಗಿ ಕಳುಹಬೇಕು.**

ಆದಿತ್ಯವಾರ
ಜನವರಿ ೧, ೧೯೩೩

# ಅಂತರಂಗ

ಸಂಪುಟ ೧
ಸಂಚಿಕೆ ೨೫

## ಯಚ್. ಜಿ. ವೆಲ್ಸರ ಪ್ರಶ್ನೆಗಳು

ನಾಲ್ಲೂರು ಮಿಲಿಯ ಜನರಿದ್ದೀರಿ. ನೀವೇನು ಮಾಡುತ್ತಿರುವಿರಿ? ನಿಮ್ಮಲ್ಲಿ ರಚನಾತ್ಮಕ ಕೆಲಸವೇನಾದರೂ ಇದೆಯೆ? ಅಥವಾ ನೀವು ಪ್ರಾಚೀನ ಕಾಲದೆಡೆಗೆ ಹಿನ್ನಡೆಯುತ್ತಿರುವಿರೆ? ಮಿ| ಯಚ್. ಜಿ. ವೆಲ್ಸರು ಭಾರತೀಯರ ಕುರಿತು ಕೇಳಿದ ಪ್ರಶ್ನೆಗಳಿವು!

ಪ್ರಾಯಶಃ ವೆಲ್ಸರಿಗೆ ಭಾರತೀಯರು ಏನು ಮಾಡುತ್ತಿದ್ದಾರೆಂದು ಚೆನ್ನಾಗಿ ತಿಳಿದಿರಬಹುದು. ಬ್ರಿಟಿಷ್ ಸಾಮ್ರಾಜ್ಯಶಾಹಿಯ ರಥದ ಗಾಲಿಗಳು ಭಾರತೀಯರೆದೆಯ ಮೇಲೆ ಒತ್ತಾಯದಿಂದ ನಡೆಸಲ್ಪಡುವಾಗ ಅದನ್ನು ಹಿಂದೆ ದೂಡುವುದರಲ್ಲಿ ಭಾರತೀಯರು ನಿರತರಾಗಿದ್ದಾರೆಂದು ಸಾಮ್ರಾಜ್ಯಶಾಹಿಯ ಪ್ರಚಾರಕರಾದ ಅವರಿಗೆ ಅರಿತಿರುವುದರಿಂದಲೇ ಅವರು ಹಾಗೆ ಪ್ರಶ್ನಿಸಿರಬೇಕು. ಭಾರತದ ಪ್ರಾಚೀನ ಮಹತ್ವವನ್ನು ಪುನಃ ಸಂಪಾದಿಸಿದರೆ ನಮ್ಮ ದೇಶದ ಅಭ್ಯುದಯವಾಗುವುದು ಖಂಡಿತ. ಆ ವೈಭವವನ್ನು ಮರಳಿ ಪಡೆಯುವ ಮೊದಲು ಎದೆಯ ಮೇಲಿರುವ ಗಾಲಿಯನ್ನು ತಪ್ಪಿಸಿಕೊಳ್ಳಬೇಕಲ್ಲವೇ?

ಒಡೆದು ಚೂರಾಗುವುದೆಂದು ಈ ಮೊದಲೇ ಬ್ರಿಟಿಷ್ ಸಾಮ್ರಾಜ್ಯದ ಕುರಿತು ಭವಿಷ್ಯ ಹೇಳಿರುವುದನ್ನು ವೆಲ್ಸರು ಕೇಳಿದ್ದಾರೆ. ಅದಕ್ಕಾಗಿಯೇ ಬ್ರಿಟಿಷ್ ರಾಜಮನೆತನದವರನ್ನು ಆಸ್ಟ್ರೇಲಿಯಾ ಮೊದಲಾದೆಡೆಗಳಲ್ಲಿ ಗವರ್ನರರಾಗಿ ನೇಮಿಸಿರಬಹುದೇ? ಯಚ್. ಜಿ. ವೆಲ್ಸರು ಮತ್ತು ಬ್ರಿಟನಿನ ರಾಜಕವಿಗಳು ಆಸ್ಟ್ರೇಲಿಯಾ ಮೊದಲಾದ ಬ್ರಿಟಿಷ್ ವಸಾಹತುಗಳಲ್ಲಿ ಸಾಮ್ರಾಜ್ಯದ ಕುರಿತು ಪ್ರಚಾರ ಕಾರ್ಯವನ್ನು ಅಪ್ರತ್ಯಕ್ಷವಾಗಿ ಕೈಕೊಳ್ಳುವರೆಂಬ ವಾರ್ತೆಯ ನಿಜವಾಗಿರಬಹುದೆ? ಸಾಮ್ರಾಜ್ಯವನ್ನುಳಿಸಿ ಕೊಳ್ಳಲು ಅವರು ಯತ್ನಿಸುವಾಗ ನಾಲ್ಲೂರು ಮಿಲಿಯ ಭಾರತೀಯರಾದ ನಾವೇನು ಮಾಡುತ್ತಿರುವೆವೆಂದು ಅವರು ವ್ಯಂಗ್ಯವಾಗಿ ಕೇಳಿರಬಹುದು!

### 'ಸಿನೆಮಾ ನಟ ಇಡೆನ್'



ಇಂಗ್ಲೆಂಡಿನ ಮಾಜಿ ವಿದೇಶ ಮಂತ್ರಿ ಮಿ| ಅಂಥನಿ ಇಡೆನ್ನರು ಇತ್ತೀಚೆಗೆ ಅಮೇರಿಕದ ಸಂಯುಕ್ತ ಸಂಸ್ಥಾನಕ್ಕೆ ಹೋಗಿ ಪ್ರಜಾಸತ್ತೆಯ ಕುರಿತು ಭಾಷಣವಿತ್ತರು. ಜರ್ಮನಿಯ ಪತ್ರಿಕೆಗಳು ಅವರನ್ನು "ಸಿನೆಮಾ ನಟ" "ರಹಸ್ಯದ ಏಜಂಟ" ಎಂದು ಮೊದಮೊದಲಾಗಿ ಟೀಕಿಸುತ್ತಿವೆ. "ಸಿನೆಮಾ ನಟ" ಇಡೆನ್ನರನ್ನು ಬ್ರಿಟಿಷ್ ಮಂತ್ರಿ ಮಂಡಲಕ್ಕೆ ಸೇರಿಸಿಕೊಳ್ಳುವ ಯತ್ನಗಳಾಗುತ್ತಿವೆ!

೦○೦

ನಿಮ್ಮಲ್ಲಿ ಚಿಂತಕರು ಅನೇಕರಿದ್ದಾರೆ. ಆದರೆ ನೀವು ಚಿಂತಿಸುವುದಿಲ್ಲ. ನಿಮಗಾಗಿ ಇತರರು ಚಿಂತಿಸಬೇಕೆ?— ಯಚ್. ಜಿ. ವೆಲ್ಸರು ಕೇಳಿದ ಇನ್ನೊಂದು ಪ್ರಶ್ನೆಯಿದು. ಬ್ರಿಟಿಷರು ನ್ಯಾಯಸಮ್ಮತವಾದ ಭಾರತೀಯ ಕೇಳಿಕೆಗಳನ್ನು ಎಡೆಬಿಡದೆ ಕಡೆಗಣಿಸಿ, ಇನ್ನೂ ಕತ್ತಿಯ ಬಲದಿಂದ ಸಾಮ್ರಾಜ್ಯವನ್ನು ನಡೆಸಬಲ್ಲೆವೆಂದು ಭಾವಿಸಿ, ಪ್ರಜಾಸತ್ತೆಯ ಮಂತ್ರವನ್ನುಚ್ಚರಿಸುತ್ತಾ, ಅದರ ಕೊರಳನ್ನು ಹಿಸುಕಿ ಮೊಸಳೆ ಕಣ್ಣೀರಿಡುತ್ತಿರುವುದು ಅವರ ಚಿಂತನೆಯ ಪ್ರಭಾವದಿಂದಾಗಿರಬಹುದು! ಎಬಿಸೀನಿಯಾ, ಜೆಕೊಸ್ಲೊವೇಕಿಯ, ಸ್ಪೈನ್, ಮತ್ತು ಚೀನಗಳ ಸ್ವಾತಂತ್ರ್ಯವನ್ನು ಅನಾಗರಿಕ ಶಕ್ತಿಗಳಿಗೆ ಸಂತೋಷದಿಂದ ದಾನಮಾಡಿ ತನ್ನ ಬೇಳೆ ಬೇಯಿಸುತ್ತಿರುವುದು ಕೂಡಾ ಆ ಚಿಂತನೆಯಿಂದಲೇ ಆಗಿರಬಹುದು. ಈ ಮೊದಲು ದಬ್ಬಾಳಿಕೆಯ ತಳಹದಿಯ ಮೇಲೆ ಕಟ್ಟಲ್ಪಟ್ಟ ನೂರಾರು ಸಾಮ್ರಾಜ್ಯಗಳು ಉರುಳಿದೆಯೆಂಬದನ್ನು ಸಂಪೂರ್ಣ ಮರೆತು ಇತರರು ಬೆವರು ಸುರಿಸಿ ದುಡಿದ್ದಫಲ

ವನ್ನು ಸೆಳೆದೊಯು , ಅಶಕ್ತರನ್ನು ಹಲವು ಶತಮಾನಗಳಿಂದ ಕ್ರೂರವಾಗಿ ಕಾಣುತ್ತಿರುವುದೂ ಆ ಚಿಂತನೆಯ ಬಲದಿಂದಾಗಿರಬಹುದು! ವಸ್ತುಸ್ಥಿತಿಯು ಹೀಗಿರುವಾಗ ಭಾರತೀಯ ಚಿಂತಕರು ಚಿಂತಿಸುತ್ತಿರುವುದು ವೆಲ್ಸರಿಗೆ ಕಾಣುವುದಾದರೂ ಹೇಗೆ?

**ರೂಸ್‌ವೆಲ್ಟರಿಗೆ**
**ಮುಸ್ಸೋಲಿನಿಯ ಎಚ್ಚರಿಕೆ**



ಯುನೈಟೆಡ್ ಸ್ಟೇಟ್ಸಿನ ಚುನಾವಣೆಯಲ್ಲಿ ಅಧ್ಯಕ್ಷ ರೂಸ್‌ವೆಲ್ಟರ ಪಕ್ಷಕ್ಕೆ ಎಂದಿನ ವಿಜಯವು ದೊರಕದಿರುವುದು ಅವರ ಸೋಲಿನ ಸಂಜ್ಞೆಯೆಂದು ಸೀನರ್ ಮುಸ್ಸೋಲಿನಿಯು ಎಚ್ಚರಿಕೆಯಿತ್ತಿದ್ದಾನೆ.

## ಅ ನಿಶ್ಚಿತ ಧೋರಣೆ.

ಭಾರತದ ಕುರಿತು ಬ್ರಿಟಿಷರು ತಮ್ಮ ನಿಶ್ಚಿತ ಧೋರಣೆಯನ್ನು ವ್ಯತ್ಯಾಸಗೊಳಿಸಲಿಲ್ಲವೆಂದೂ ವೈಸರಾಯರಾದ ಲಾರ್ಡ್ ಲಿನ್ಲಿತ್ಗೋರವರು ಅಸ್ಪಷ್ಟವಾಗಿ ಹೇಳಿದ್ದಾರೆ. ಫೆಡರಲ್ ಯೋಜನೆಯನ್ನು ಭಾರತದ ಮೇಲೆ ಹೊರಿಸಿಯೆ ಸಿದ್ಧ— ಇದು ತಮ್ಮ ಧೋರಣೆಯು ವ್ಯತ್ಯಾಸವಾಗಲಿಲ್ಲವೆಂದು ಹೇಳುವುದರ ಇನ್ನೊಂದು ರೂಪ. ನಿರಂಕುಶ ಪ್ರಭುತ್ವವನ್ನೂ ಸಾಂಕುಶ ಪ್ರಭುತ್ವವನ್ನೂ ಒಂದುಗೂಡಿಸಿ, ಶೇಕಡಾ ೮೦ರಷ್ಟು ಹಣಕಾಸುಗಳ ಮೇಲೆ ವಿಧಾಯಕ ಸಭೆಗೆ ಯಾವ ಅಧಿಕಾರವನ್ನೂ ಕೊಡದೆ, ಸೈನ್ಯವನ್ನು ಬ್ರಿಟಿಷ್ ಉಕ್ಕಿನ ಮುಷ್ಟಿಯೊಳಗಿಟ್ಟುಕೊಂಡು ಹೇಗಾದರೂ ಭಾರತೀಯರ ಕಣ್ಣಿಗೆ ಮಣ್ಣೆರಚಿ, ಎಂದಿನಂತೆ ಹಿಂದುಸ್ಥಾನವನ್ನು ಆಳಿಕೊಂಡು ಬರಲಿಕ್ಕಾಗಿ ಮಾಡಿರುವ ಆ ಫೆಡರೇಶನನ್ನು ಜಾರಿಗೆ ತಂದೇ ತೀರಲಾಗುವುದೆಂದು ವೈಸರಾಯರ ಇತ್ತೀಚೆಗಿನ ಭಾಷಣವು ಸ್ಪಷ್ಟಗೊಳಿಸುತ್ತದೆ. ಬ್ರಿಟಿಷ್ ಧೋರಣೆಯು ಹೀಗಿರುವಾಗ, ಭಾರತೀಯರ ನಿಶ್ಚಿತ ಧೋರಣೆಯಾಗಿರುವ ಫೆಡರೇಶನನ್ನು ವಿರೋಧಿಸುವ ಕಾರ್ಯವನ್ನು ಭಾರತೀಯರ. ನಡಿಸಲೇ ಬೇಕಾಯಿತೆಂದು ಅವರ ಭಾಷಣವು ಅಪ್ರತ್ಯಕ್ಷವಾಗಿ ಸೂಚಿಸುತ್ತದೆ. ಫೆಡರಲ್ ಯೋಜನೆಯು ಪ್ರಾಂತಿಕ ಸ್ವಾಯತ್ತೆಯಂತಾಗುವುದೋ, ಅಥವಾ ಭಾರತೀಯರು ಸಂಘಟಿತ ಅಭಿಪ್ರಾಯಕ್ಕೆ ಪ್ರಾಮುಖ್ಯತೆಯು ಸಿಗುವುದೋ ಎಂಬುದೊಂದು ಪ್ರಾಮುಖ್ಯ ಪ್ರಶ್ನೆಯಾಗಿದೆ.

---

## ತುಸು ವಿನೋದ

### ಉದಾಹರಣೆ

ಮಗ-ಅಪ್ಪಾ, ಬಂದೂಕಿಗೂ ಮಿಶನ್‌ಗನ್ನಿಗೂ ಏನಾದರೂ ವ್ಯತ್ಯಾಸವಿದೆಯೇ?

ತಂದೆ—yes there is; ನಿಮ್ಮಮ್ಮನಿಗೂ, ನನಗೂ ಮಾತು ನಡೆದ ಹಾಗೆ ಇದೆ ಅಷ್ಟೇ.

೦೦೦

### ಪರಿಣಾಮ !

ಮೆನೇಜರ್:-ನಿಮ್ಮ ಫ್ಯಾಕ್ಟರಿಗೆ ಕಾವಲಿನವ ಬೇಕೆಂದು ನಮ್ಮ ಪತ್ರಿಕೆಯಲ್ಲಿ ಜಾಹಿರಾತು ಮಾಡಿದರಷ್ಟೆ. ಏನಾದರೂ ಪ್ರಯೋಜನವಾಯಿತೆ?

ಫ್ಯಾಕ್ಟರಿ ಮೆನೇಜರ್;-ಮತ್ತೆ! ನಿನ್ನೆ ರಾತ್ರಿ ಫ್ಯಾಕ್ಟರಿಯಲ್ಲಿ ದೊಡ್ಡ ಕಳವಾಗಿದೆ.

---

# ಬ್ರಿಟಿಷ್ ಸಾಮ್ರಾಜ್ಯವು ಛಿನ್ನಭಿನ್ನವಾಗುವುದೆ?

ಬ್ರಿಟಿಷ್ ಸಾಮ್ರಾಜ್ಯದ ಪರಿಸ್ಥಿತಿಯಲ್ಲಿ ವ್ಯತ್ಯಾಸವಾಗಲೇ ಬೇಕೆಂಬ ಅಭಿಪ್ರಾಯವು ಇತ್ತೀಚೆಗೆ ಹೆಚ್ಚಿನವರಲ್ಲಿ ಬೇರೂರುತ್ತಾ ಬಂದಿದೆ. ವರ್ಸೇಲ್ ಒಪ್ಪಂದದ ಹೆಚ್ಚಿನಂಶಗಳು ಹರಿದು ಚೂರು ಮಾಡಲ್ಪಟ್ಟಿರುವುದರಿಂದ ಜನಾಂಗ ಸಭೆಯ ಮೂಲಕ ಕೆನ್ಯಾ, ಉಗಾಂಡಾ, ಟೆಂಗನೀಕ, ನ್ಯಾಸಾಲೇಂಡ್ ಮತ್ತು ರ್‍ಹೊಡೋಸಿಯಗಳನ್ನು ಪಡೆದ ಬ್ರಿಟಿಷ್ ಸರಕಾರವು, ಅವುಗಳನ್ನು ಅಂತರ್‌ರಾಷ್ಟ್ರೀಯ ಶಕ್ತಿಯ ಅಧೀನವಿರಿಸಬೇಕೆಂಬ ಸೂಚನೆಗಳು ಮುಂತರಲ್ಪಡುತ್ತಿವೆ. ಈ ಲೇಖನದಲ್ಲಿ ಬ್ರಿಟಿಷ್ ಸಾಮ್ರಾಜ್ಯದ ಯಾವ ಭಾಗಗಳು ಅಪಾಯಕರ ಪರಿಸ್ಥಿತಿಯಲ್ಲಿವೆಯೆಂದು ವಿವರಿಸಲಾಗಿದೆ.

**ಡ್ಯೂಕ್ ಆಫ್ ವಿಂಡ್ಸರರಿಗೆ ಆಸ್ಟ್ರೇಲಿಯದ ಗವರ್ನರರ ಸ್ಥಾನ!**



ಈಗ ಆಸ್ಟ್ರೇಲಿಯದ ಗವರ್ನರರಾಗಿ ನೇಮಿಸಲ್ಪಟ್ಟಿರುವ ಡ್ಯೂಕ್ ಆಫ್ ಕೆಂಟರು ಕೆನಡಕ್ಕೆ ವರ್ಗಾಯಿಸಲ್ಪಡುವರೆಂದೂ ಅವರ ಸ್ಥಾನದಲ್ಲಿ ಡ್ಯೂಕ್ ಆಫ್ ವಿಂಡ್ಸರರು ಗವರ್ನರರಾಗಿ ನೇಮಿಸಲ್ಪಡುವರೆಂದೂ ತಿಳಿಯಲಾಗಿದೆ.

ಬ್ರಿಟಿಷ್ ಸಾಮ್ರಾಜ್ಯದಲ್ಲಿ ಸೂರ್ಯಾಸ್ತಮವಿಲ್ಲ! ಬ್ರಿಟಿಷರು ಹೆಮ್ಮೆಯಿಂದ ಹೇಳುತ್ತಿದ್ದ ಮಾತಿದು. ಆದರೆ ಇಷ್ಟರ ತನಕ ಕತ್ತಿಯ ಬಲದಿಂದ ಆಳಿಕೊಂಡು ಬಂದ ಸಾಮ್ರಾಜ್ಯದಲ್ಲಿ ಬಿರುಕು ಬೀಳಲಾರಂಭಿಸಿದೆ. ಪೆಲೆಸ್ತೈನಿನಲ್ಲಿ ಬ್ರಿಟಿಷರ ಉಪಟಳವನ್ನು ಸಹಿಸಲಾರದೆ ಅರಬರು ಅವರನ್ನು ಪ್ರತ್ಯಕ್ಷವಾಗಿ ವಿರೋಧಿಸಲಾರಂಭಿಸಿದ್ದಾರೆ ಎಲ್ಲಾ ಅವ್ಯವಸ್ಥೆಗಳಿಗಿಂತ ಪೆಲೆಸ್ತೈನಿನ ಗೊಂದಲವನ್ನು ನಿಲ್ಲಿಸುವುದು ಬ್ರಿಟಿಷರಿಗೆ ಬಹಳ ಪ್ರಯಾಸವಾಗಿ ಪರಿಣಮಿಸಿದೆ.

೩೫೦,೦೦೦,೦೦೦ ಜನರಿರುವ ಭಾರತವನ್ನು ಸಂರಕ್ಷಿಸಲಿಕ್ಕಾಗಿ ೨೦,೦೦೦ ಮಂದಿ ವ್ಯವಸ್ಥಿತ ಬ್ರಿಟಿಷ್ ಸೈನಿಕರೂ ೧೬೫,೦೦೦ ಮಂದಿ "ನೇಟಿವ್" ಸೈನಿಕರೂ ಇದ್ದಾರೆಂದು ಹೆರಾಲ್ಡ್ ಕಲ್ಲೆಂಡರ್‌ರವರು ಬರೆಯುತ್ತಾರೆ.

**ಬ್ರಿಟಿಷ್ ಸಾಮ್ರಾಜ್ಯದ ವಸಾಹತುಗಳು ಮತ್ತು ಅವುಗಳ ಜನಸಂಖ್ಯೆ**

**ಏಸ್ಯಾಖಂಡದಲ್ಲಿ**

ವಿಸ್ತಾರ: ೨,೧೬೬,೨೬೩ ಚದರ ಮೈಲುಗಳು, ಜನಸಂಖ್ಯೆ: ೩೬೫,೩೯೬,೦೦.

**ಆಸ್ಟ್ರೇಲಿಯದಲ್ಲಿ**

ವಿಸ್ತಾರ: ೩,೨೬೬,೯೧೭ ಚದರ ಮೈಲುಗಳು ಜನಸಂಖ್ಯೆ: ೯,೬೩೫,೦೦೦

**ಆಫ್ರಿಕಾಖಂಡದಲ್ಲಿ**

ವಿಸ್ತಾರ: ೩,೮೨೦,೨೪ ಚದರ ಮೈಲು ಜನಸಂಖ್ಯೆ: ೫೧,೬೬೫,೦೦೦

**ಅಮೇರಿಕಖಂಡದಲ್ಲಿ**

ವಿಸ್ತಾರ: ೪,೦೦೮,೨೧೪ ಚದರ ಮೈಲು ಜನಸಂಖ್ಯೆ: ೧೩,೯೯೧,೦೦೦

**ಯುರೋಪುಖಂಡದಲ್ಲಿ**

ವಿಸ್ತಾರ: ೨೭,೧೨೫ ಚದರ ಮೈಲು ಜನಸಂಖ್ಯೆ: ೩,೨೪೧,೦೦೦

**ಗ್ರೇಟ್‌ಬ್ರಿಟನ್ ಮತ್ತು ಉತ್ತರ ಆಯರ್‌ಲೇಂಡ್**

ವಿಸ್ತಾರ: ೯೪,೬೩೩ ಚದರ ಮೈಲು ಜನಸಂಖ್ಯೆ: ೪೬,೩೮೬,೦೦೦.

ಭಾರತದ ಸರಹದ್ ಪ್ರಾಂತ್ಯದಲ್ಲಿ ಇನ್ನು ಯುದ್ಧವು ನಡೆಯುತ್ತಲೇ ಇದೆ. ವಜೀರಿಸ್ಥಾನ ಮೊದಲಾದೆಡೆಗಳಲ್ಲಿ ವೀರ ಪಠಾನರೊಡನೆ ಯಶಸ್ವಿಯಾಗಿ ಹೋರಾಡಲು ಇಷ್ಟರ ತನಕ ಬ್ರಿಟಿಷ್ ಸರಕಾರಕ್ಕೆ ಸಾಧ್ಯವಾಗಲಿಲ್ಲ. ಪೆಲೆಸ್ತೈನಿನ ಯುದ್ಧವು ವಜೀರಿಸ್ಥಾನಕ್ಕಿಂತಲೂ ಮಹತ್ತದ್ದಾಗಿದೆ. ಈಗಾಗಲೆ ಪೆಲೆಸ್ತೈನಿಗೆ ೩೦,೦೦೦ ಸೈನಿಕರು ಕಳುಹಿಸಲ್ಪಟ್ಟಿದ್ದಾರೆ. ಅರಬರ ಸೂಚನೆಗಳನ್ನು ಮನ್ನಿಸದೆ

ಕತ್ತಿಯ ಬಲದಿಂದಲೇ ಪೆಲೆಸ್ಟೈನಿನಲ್ಲಿ "ಶಾಂತಿ"ಯನ್ನು ಸ್ಥಾಪಿಸಬಹುದೆಂದು ಬ್ರಿಟಿಷ್ ಸರಕಾರವು ಅಭಿಪ್ರಾಯ ಪಟ್ಟಂತಿದೆ.

ಬ್ರಿಟಿಷ್ ಸಾಮ್ರಾಜ್ಯಕ್ಕೆ ಎಲ್ಲೆಡೆಗಳಿಂದಲೂ ಉಪಟಳವು ಹೆಚ್ಚುತ್ತಿರುವುದರಿಂದ ತಮ್ಮ ವಸಾಹತುಗಳನ್ನು ರಕ್ಷಿಸಿಕೊಳ್ಳಲು ಜಲ, ನೆಲ ಮತ್ತು ಆಕಾಶಪಡೆಗಳು ಬ್ರಿಟಿಷ್ ಸರಕಾರದಿಂದ ಹೆಚ್ಚಿಸಲ್ಪಡುತ್ತಿದೆ.

**ಪೆಲೆಸ್ತೈನಿನ ಪ್ರಾಮುಖ್ಯತೆ.**

ಬ್ರಿಟಿಷ್ ಸಾಮ್ರಾಜ್ಯಕ್ಕೆ ಪೆಲೆಸ್ಟೈನಿನ ಪ್ರಶ್ನೆಯು ಅತ್ಯಂತ ಪ್ರಾಮುಖ್ಯವಾಗಿದೆಯೆಂದು ಮೊದಲೇ ಹೇಳಿದ್ದೇನೆ. ಇದಕ್ಕೆ ಕಾರಣಗಳಿವೆ:- ಈ ಪ್ರಾಮುಖ್ಯ ಭೂವಿಭಾಗವು ಸಮುದ್ರದ ಬದಿಯಲ್ಲಿದೆ. ಪೌರ್ವಾತ್ಯದೇಶಗಳಿಗೆ ವಿಮಾನಗಳು ಪೆಲೆಸ್ಟೈನಿನಿಂದಾಗಿ ಹಾದುಹೋಗುತ್ತಿವೆ. ಅರಬರ ರಾಷ್ಟ್ರೀಯತೆಯು ದಿನೇದಿನೇ ಹೆಚ್ಚುತ್ತಿರುವುದರಿಂದ ಈ ಪ್ರಾಮುಖ್ಯ ದೇಶವನ್ನು ಕಳೆದುಕೊಳ್ಳಬಾರದೆಂಬ ಮಹದಭಿಲಾಷೆಯು ಬ್ರಿಟಿಷರಲ್ಲುಂಟಾಗಿದೆ. ಹಲವೆಡೆಗಳಲ್ಲಿ ಮುಸ್ಲಿಮರನ್ನು ಬ್ರಿಟಿಷರು ಆಳುತ್ತಿರುವುದರಿಂದ ಯಾವುದಾದರೊಂದು ಮುಸ್ಲಿಮ್ ದೇಶದಲ್ಲಿ ಗೊಂದಲವುಂಟಾದರೆ ಅದರ ಪರಿಣಾಮವು ಕಠಿನವಾಗುತ್ತದೆಂದು ಅವರಿಗರಿತಿದೆ. ಅರಬರು ಬ್ರಿಟಿಷರಿಗೆ ವಿರೋಧವಾಗಿ ದಂಗೆಯೇಳಬೇಕೆಂದು ಇಂಗ್ಲೆಂಡಿನ ಅಪ್ರತ್ಯಕ್ಷ ವೈರಿಯಾದ ಜರ್ಮನಿಯು ಸೂಚಿಸಿರುವುದಲ್ಲದೆ ಅರಬರಿಗೆ ಯುದ್ಧ ಸಾಧನಗಳೂ ಕೂಡಾ ಒದಗಿಸಿ ಕೊಡುವುದರಿಂದ ಬ್ರಿಟಿಷರಿಗೆ ತಮ್ಮ ಹಿತಸಂಬಂಧಗಳನ್ನು ಆದಷ್ಟು ಜತನದಿಂದ ಕಾಯ್ದುಕೊಳ್ಳಬೇಕಾಗಿದೆ.

**ದೂರ ಪ್ರಾಂತ್ಯದಲ್ಲಿ**

ಪೆಲೆಸ್ಟೈನಿನಲ್ಲಿ ಪರಿಸ್ಥಿತಿಯು ಹೀಗಿರುವಾಗ ಏಸ್ಯಾಖಂಡದ ಅತಿ ಪೂರ್ವದಲ್ಲಿ ಜಪಾನು, ಬ್ರಿಟಿಷ್ ಹಾಂಗ್‌ಕಾಂಗ್ ವಸಾಹತಿನ ಉತ್ತರದಲ್ಲಿ ತನ್ನ ಸೈನ್ಯವನ್ನು ತಂದಿರಿಸಿದಿರುವುದಲ್ಲದೆ ಚೀನಾ ಮತ್ತು ಬ್ರಿಟನ್ ಪಾಲಿನಿಂದ ನಡೆಸುತ್ತಿದ್ದ ಕ್ಯಾಂಟನ್‌ಕೌಲೂನ್ ರೈಲುದಾರಿಯನ್ನು ಜಪಾನು ಕೈವಶಪಡಿಸಿಕೊಂಡಿದೆ. ಇಷ್ಟಲ್ಲದೆ ಚೀನದಿಂದ ಬ್ರಿಟಿಷರನ್ನು ಆದಷ್ಟು ಬೇಗನೆ ಓಡಿಸಿ ಅವರ ಪ್ರಭಾವವನ್ನು ಬೇರು ಸಹಿತ ಕಿತ್ತೊಗೆಯಲು ಬದ್ಧಕಂಕಣರಾಗಿರುವೆವೆಂದು ಜಪಾನ್ ಅಧಿಕಾರಿಗಳು ಈಗಾಗಲೆ ಘಂಟಾಘೋಷವಾಗಿ ಸಾರಿದ್ದಾರೆ. ಹಾಂಗ್‌ಕಾಂಗನ್ನು ಕೈವಶಪಡಿಸಿಕೊಳ್ಳದಿದ್ದರೂ, ಜಪಾನ್ ಸೈನ್ಯವು ಅದರ ಸುತ್ತುಮುತ್ತಲೂ ಮುತ್ತಿರುವುದರಿಂದ ಬ್ರಿಟಿಷರು ತಮ್ಮ ವ್ಯಾಪಾರಕ್ಕೆ ತೊಡಕುಂಟಾಗಬಹುದೆಂದು ಬೆದರಿದ್ದಾರೆ.

**"ಅಪಾಯಕರ ಧೋರಣೆ."**



ಬ್ರಿಟಿಷ್ ಮಂತ್ರಿಮಂಡಲವು ಈಗ ಅನುಸರಿಸುತ್ತಿರುವ ಧೋರಣೆಯು ಸಾಮ್ರಾಜ್ಯದ ಹಿತದೃಷ್ಟಿಯಲ್ಲಿ ಅಪಾಯಕರವೆಂದು ಹೇಳುತ್ತಿರುವ

**ಮಿ| ವಿನ್‌ಸ್ಟನ್ ಚರ್ಚಿಲ್**

**ವಸಾಹತುಗಳ ಸಮಸ್ಯೆ**

ಒಂದೆಡೆಯಲ್ಲಿ ಮೇಲಿನ ಗೊಂದಲಗಳು ಬ್ರಿಟಿಷ್ ಅಧಿಕಾರಿಗಳಿಗೆ ನಿದ್ರೆಬಾರದಂತೆ ಮಾಡುತ್ತಿರುವಾಗ ಅಡಾಲ್ಫ್ ಹಿಟ್ಲರನ ವಸಾಹತುಗಳ ಕೇಳಿಕೆಯು ಇನ್ನಷ್ಟು ಅಶಾಂತಿಯನ್ನುಂಟುಮಾಡಿದೆ. ಜನಾಂಗ ಸಭೆಯ ಹೆಸರಿನಲ್ಲಿ ಬ್ರಿಟಿಷರು ಅಧಿಕಾರ ನಡೆಸಿಕೊಂಡು ಬರುವ ಫಲವತ್ತಾದ ವಸಾಹತುಗಳನ್ನು ಕಳೆದುಕೊಳ್ಳುವ ಸಂದರ್ಭವೊದಗಿದರೆ ಯಾವುದನ್ನು ಜರ್ಮನಿಗೆ ಕೊಡುವುದೆಂಬ ಯೋಚನೆಯು ಅವರಲ್ಲಿ ಉಂಟಾಗಿದೆ. ಮಹಾ ಯುದ್ಧದ ಮೊದಲು ಜರ್ಮನಿಯ ಅಧೀನದಲ್ಲಿ ಯಾವ ವಸಾಹತುಗಳಿದ್ದವೋ ಅವುಗಳನ್ನೇ ಕೊಡಬೇಕೆಂದು ಹಿಟ್ಲರನ ವಾದವಾಗಿದೆ. ಟೇಂಗನೀಕವನ್ನು ಜರ್ಮನಿಗೆ ಕೊಡಬಾರದೆಂದು ಅಲ್ಲಿಯ ಜನರು ಈಗಾಗಲೇ ತಮ್ಮ ಇಚ್ಛೆಯನ್ನು ಸ್ಪಷ್ಟಗೊಳಿಸಿದ್ದಾರೆ. ದಕ್ಷಿಣಾಫ್ರಿಕದ ಯೂನಿಯನ್ ಕೂಡಾ ಅದೇ ಅಭಿಪ್ರಾಯದಲ್ಲಿದೆ.

(೨೩ನೆ ಪುಟ ನೋಡಿರಿ)



# ನಿಮಗೆ ಬೇಸರವಾದಾಗ ನನಗೆ ಬರೆಯಿರಿ.

- ಪ್ರತಿವಾರವೂ ಕರ್ನಾಟಕದ ವಿವಿಧ ಭಾಗಗಳಿಂದ ಅಧಿಕ ಸಂಖ್ಯೆಯಲ್ಲಿ ಪ್ರಶ್ನೆಗಳು ಬರುತ್ತಿರುವುದರಿಂದ ಸ್ಥಳ ಸಂಕೋಚದ ದೆಸೆಯಿಂದ ಎಲ್ಲರ ಪ್ರಶ್ನೆಗಳು ಒಮ್ಮೆಯೇ ಉತ್ತರಿಸಲ್ಪಡಲಾಗುವುದಿಲ್ಲ.
- ಯೋಗ್ಯವಾದ ಪ್ರಶ್ನೆಗಳಿಗೆ ಯೋಗ್ಯವಾದ ಉತ್ತರಗಳು ಕೊಡಲ್ಪಡುವವು. ಕೇವಲ ತಮಾಷೆಗಾಗಿ ಕೇಳಲ್ಪಡುವಂಥವುಗಳಿಗೆ ತಮಾಷೆಯ ಉತ್ತರ ಕೊಡಲಾಗುವುದು.
- ಬಹಳ ಅಶ್ಲೀಲವಾದ ಪ್ರಶ್ನೆಗಳಿಗೆ ಈ ವಿಭಾಗದಲ್ಲಿ ಎಡೆಯಿಲ್ಲ.
- ಇತರ ಪತ್ರಿಕೆಗಳನ್ನು ಅಥವಾ ವ್ಯಕ್ತಿಗಳನ್ನು ಬೈದು ಕೇಳುವ ಪ್ರಶ್ನೆಗಳಿಗೆ ಉತ್ತರವು ಸಿಗಲಾರದು.
- ಪ್ರಶ್ನೆಗಳು ಸಾಧ್ಯವಾದಷ್ಟು ಮಟ್ಟಿಗೆ ಸಾರ್ವಜನಿಕ ಅಭಿರುಚಿಯುಳ್ಳದಾಗಿರಬೇಕು.

ಶ್ರೀ. ಕೆ. ರಾಮಚಂದ್ರ
139 B. ಸೆಪಿಂಗ್ಸ್‌ರೋಡು
ಬೆಂಗಳೂರು ದಂಡು.

ನಾನು ಒಬ್ಬ ಇಪ್ಪತ್ತು ವಯಸ್ಸಿನ ತರುಣನು. ಅವಿವಾಹಿತನು. ನನ್ನ ಯೋಗ್ಯತಾನುಸಾರ ಸಂಪಾದಿಸುತ್ತೇನೆ. ಆದರೆ ನನಗೆ ಪ್ರಪಂಚದಲ್ಲಿ ಸ್ನೇಹಿತರೆಂದರೆ ತುಂಬಾ ಪ್ರೀತಿ. ನಾನವರನ್ನು ನನ್ನ ಜೀವಕ್ಕಿಂತಲೂ ಮಿಗಿಲಾಗಿ ಭಾವಿಸುತ್ತಿದ್ದೇನೆ. ನನ್ನ ಈ ರೀತಿಯಾದ ನಡತೆಯನ್ನು ನೋಡಿ ಅನೇಕರು ನನಗೆ ಅತಿಯಾಗಿ ಯಾರಲ್ಲಿಯೂ ಸ್ನೇಹಮಾಡಬಾರದು ಎಂದು ಬುದ್ಧಿವಾದಗಳನ್ನು ಹೇಳುತ್ತಿದ್ದರು. ಅವರ ಮಾತುಗಳನ್ನು ನಾನು ಲಕ್ಷಿಸದೆ ನಾನು ಒಬ್ಬ ಗೆಳೆಯನೊಂದಿಗೆ ಅತಿಯಾಗಿ ಸ್ನೇಹದಿಂದಿದ್ದೆನು. ನಮ್ಮಿಬ್ಬರ ಸ್ನೇಹದ ಬೆಲೆಯೆ ಇರಲಿಲ್ಲ. ನಾನು ನನ್ನ ನಿತ್ಯ ಕರ್ತವ್ಯಗಳನ್ನು ಬಿಟ್ಟರೂ ನನ್ನ ಮಿತ್ರನನ್ನು ಬಿಟ್ಟು ಇರುತ್ತಿದ್ದಿಲ್ಲ. ನಾನು ತಿನ್ನುವುದರಲ್ಲಿ ಉಡುವುದರಲ್ಲಿ ಅರ್ಧವನ್ನು ಅವನಿಗೆ ಅರ್ಪಿಸುತ್ತಿದ್ದೆನು. ಹೀಗೆ ನನ್ನಲ್ಲಿ ತಿಂದು ತೇಗಿದ ಸ್ನೇಹಿತನು ಈಗ ನನ್ನಲ್ಲಿ ಹಗೆಯನ್ನು ಸಾಧಿಸಿ ನನ್ನ ಗುಟ್ಟೆಲ್ಲವನ್ನು ತಿಳಿದು ನನ್ನೊಂದಿಗೆ ಪಂಥ ಸಾಧಿಸುತ್ತಿರುವನು. ಈ ರೀತಿಯ ಪರಿಣಾಮವನ್ನು ನೋಡಿ ನನಗ ಬಹಳ ಬೇಸರವಾಗಿದೆ, ಈಗ ನನಗೆ ದಿಕ್ಕು ತೋಚದಾಗಿದೆ. ವ್ಯಥೆಪಡುವ ಕಾಲ ಒದಗಿದೆ. ದಯವಿಟ್ಟು ಮಾರ್ಗ ತೋರಬೇಕಾಗಿ ಕೋರುತ್ತೇನೆ.

ಪ್ರತಿಯೊಂದು ವಿಚಾರಕ್ಕೂ ಒಂದು ಮೇರೆಯಿರಬೇಕು. ಮಿತಿಯಿರಬೇಕು. ಹೀಗೆನ್ನುವುದರ ಯೋಗ್ಯಾಯೋಗ್ಯತೆಯು ನಿಮಗೆ ಅನುಭವದಿಂದಲೆ ತಿಳಿದಿರಬಹುದೆಂದು ನನ್ನ ಭಾವನೆ. ಅದಂತಿರಲಿ, ನಿಮ್ಮ ಮಿತ್ರ ನಿಮ್ಮೊಡನೆ ಹಗೆಯನ್ನು ಸಾಧಿಸುತ್ತಿರುವುದಕ್ಕಾಗಿ ನೀವು ಅಷ್ಟೊಂದು ಬೇಸರಿಸಬೇಕಾಗಿಲ್ಲ. ನಿಮ್ಮ ಗುಟ್ಟುಗಳನ್ನು ಅವರು ತಿಳಿದಿರುವಂತೆ ಅವರ ಗುಟ್ಟನ್ನು ನೀವೂ ತಿಳಿದಿರಬಹುದು. ವಸ್ತುಸ್ಥಿತಿಯು ಹೀಗಿರುವಾಗ ನೀವು ಬೇಸರಿಸಲು ಕಾರಣವಿಲ್ಲ. ಸ್ನೇಹಿತರು ಯಾವಾಗಲೂ ಸ್ನೇಹಿತರಾಗಿಯೇ ಉಳಿಯುವರೆಂದು ಹೇಳಲಾಗುವುದಿಲ್ಲ. ಜಗತ್ತಿನಲ್ಲಿ ಸ್ನೇಹಾಚಾರಗಳನ್ನು ವಿವಿಧ ದೃಷ್ಟಿಯಿಂದ ಬೆಳೆಸುತ್ತಾರೆ. ಕೆಲವರು ತಮ್ಮ ಹಿತಸಂಬಂಧಗಳನ್ನು ರಕ್ಷಿಸುವುದಕ್ಕಾಗಿ, ಇನ್ನು ಕೆಲವರು ತಮಗೆ ಪ್ರಿಯವಾದವುಗಳನ್ನು ಸಾಧಿಸುವುದಕ್ಕಾಗಿ. ನಿಮ್ಮ ಮಿತ್ರರು ಯಥಾರ್ಥ ಸ್ನೇಹಿತರಾಗಿದ್ದರೆ ನಿಮಗೆ ಅಹಿತವಾದುದನ್ನು ಎಷ್ಟಕ್ಕೂ ಮಾಡಲಿಕ್ಕಿಲ್ಲ. ಕೇವಲ ಇತರ ದೃಷ್ಟಿಯಲ್ಲಿ ಅವರು ನಿಮ್ಮೊಡನೆ ಮೈತ್ರಿಯನ್ನು ಸಂಪಾದಿಸಿದ್ದರೆ, ಅಂಥವರಿಂದ ನೀವು ಇಷ್ಟು ಬೇಗನೆ ದೂರವಾದುದಕ್ಕಾಗಿ ಸಂತೋಷಿಸಬೇಕು. ಆದರೆ ಕೆಲವೊಮ್ಮೆ ಶುಷ್ಕ ವಿಚಾರಗಳಿಗಾಗಿ ಮಿತ್ರರು ಜಗಳಮಾಡಿಕೊಳ್ಳುವುದುಂಟು. ಸ್ವಲ್ಪ ಸಮಯದೊಳಗೆ ಪುನಃ ರಾಜಿಮಾಡಿಕೊಳ್ಳುವುದೂ ಉಂಟು. ಪ್ರಾಯಶಃ ನಿಮ್ಮ ಜಗಳವು ಈ ಜಾತಿಗೆ ಸೇರಿರುವುದಾಗಿರಬಹುದು. ನೀವಿಬ್ಬರು ಯಥಾರ್ಥ ಮಿತ್ರರಾಗಿದ್ದರೆ ನಿಮ್ಮೊಳಗೆ ರಾಜಿಯಾಗಬಹುದು. ಒಂದು ವೇಳೆ ಸಂಧಾನವಾಗುವ ಸಂಭವವಿಲ್ಲದಿದ್ದರೆ ನೀವು ಆ ಕುರಿತು ಯೋಚಿಸುವುದನ್ನೇ ಬಿಟ್ಟುಬಿಡಿರಿ.

೦೦೦

**ಶ್ರೀ. ಯನ್. ಬಿ. ಪಟ್ವರ್ಧನ್.**
**ಬಸ್ ಸ್ಟೇಂಡ್ ಹೋಟೆಲು ಮಂಡ್ಯ**

ನಮ್ಮ ದೇಶದಲ್ಲಿ ಹಿಂದೂ ಮುಸ್ಲಿಮ್ ಗಲಭೆಗಳು ಆಗಾಗ ನಡೆಯುತ್ತಿರುವುದು ಸರಿಯುಷ್ಟೆ? ಹಿಂದೂ ಮತ್ತು ಮುಸ್ಲಿಮ್ ಈ ಎರಡು ಕೋಮುಗಳು, ದೇಶದಲ್ಲೆಲ್ಲ ಕೋಮುವಾರು ಭಾವನೆಯನ್ನು ಬಿತ್ತಿ ದೇಶದ ಅವನತಿಗೆ ಕಾರಣಭೂತರಾಗಿರುವುದೂ ಸರಿಯಷ್ಟೆ? ಈ ವಿಷಮ ಪರಿಸ್ಥಿತಿಯಲ್ಲಿ, ಹಿಂದೂ ಸಮಾಜದ ಕೆಲವು ಪ್ರತಿಷ್ಠಿತ ವ್ಯಕ್ತಿಗಳಿಂದಾಗಿ, ಸ್ವೈಯಿನಿನಂತೆ ಯಾದವೀ ಕಲಹಗಳು ಆಗಾಗ ತಲೆದೋರುತ್ತಿರುತ್ತವೆ. ಈ ಅಂತಃ ಕಲಹಗಳ ದೆಸೆಯಿಂದ ಸುತ್ತುಮುತ್ತಲಿನ ಬಡ ಕುಟುಂಬಗಳು ಕಷ್ಟಕ್ಕೀಡಾಗಿ ತುಂಬಾ ಶೋಚನೀಯ ಸ್ಥಿತಿಯಲ್ಲಿರುವುದು ಕಂಡುಬರುತ್ತೆ. ಅಲ್ಲದೆ ರಾತ್ರಿ ಹಗಲೆನ್ನದೆ ಕಷ್ಟಪಟ್ಟು ಸಂಪಾದಿಸಿದ ಧನವನ್ನು, ವಕೀಲರ, ಕಛೇರಿಗಳ, ಪೋಲೀಸಿನವರ, ಹೆಸರಿನಲ್ಲಿ ಸುರಿಯುವುದರಲ್ಲಿ ಯಾವ ಅರ್ಥವು ಅಡಗಿಕೊಂಡಿರಬಹುದು?

ಪರಸ್ಪರ ಜಗಳವಾಡಿಕೊಂಡು ಅದಕ್ಕಾಗಿ ತಮ್ಮ ತನುಮನ ಧನಗಳನ್ನು ಸವೆಯಿಸುವುದರಲ್ಲಿ ಯಾವ ಅರ್ಥವೂ ಇಲ್ಲವೆನ್ನಿ. ಹಿಂದೂ ಮುಸಲ್ಮಾನರಲ್ಲಿ ಯಾವಾಗಲೂ ಅಭಿಪ್ರಾಯ ಭೇದವಿರಬೇಕೆಂದು ನಮ್ಮ ಆಳರಸರು ಯತ್ನಿಸುತ್ತಿರುವರೆಂಬುದಕ್ಕೆ ಅವರ ಕಾಯಿದೆ ಮತ್ತು ಇನ್ನಿತರ ವಿಚಾರಗಳೇ ಸಾಕ್ಷಿಯಾಗಿವೆ. ಆದರೆ ಈ ಗುಪ್ತ ಪ್ರಚಾರದ ರಹಸ್ಯವನ್ನರಿಯದೆ ನಮ್ಮ ಹಿಂದೂ ಮುಸಲ್ಮಾನ ಬಾಂಧವರು ಹೊಡೆದಾಡಿಕೊಳ್ಳಲು ಹಿಂಜರಿಯದಿರುವುದನ್ನು ನೋಡುವಾಗ ನಾವು ನಾಚಿಕೆಯಿಂದ ತಲೆ ತಗ್ಗಿಸಬೇಕಾಗುತ್ತದೆ. ನಮ್ಮೊಳಗಿನ ಕಲಹವೆಂದರೆ ನಮ್ಮನ್ನು ಆಳುವವರ ಸುಖಶಾಂತಿ; ನಮ್ಮ ದಾರಿದ್ರ್ಯವೇ ಅವರ ಸುಖ! ಆದರೆ ಅಂತಹಶುಷ್ಕಜಾತೀಯ ಕಲಹಗಳು ಇತ್ತೀಚೆಗೆ ಕಡಿಮೆಯಾಗುತ್ತಾ ಬರುತ್ತಿರುವುದು ಬಹಳ ಸಂತೋಷದ ಸಂಗತಿಯೆನ್ನಬೇಕು. ನಮ್ಮ ನಾಡಿನ ಯುವಕರು ಜಾತಿ ಮತ ವ್ಯತ್ಯಾಸಕ್ಕೆ ಹೆಚ್ಚಿನ ಲಕ್ಷ್ಯವೀಯದೆ ಪರಸ್ಪರ ಪ್ರೇಮಸೌಹಾರ್ದಗಳನ್ನು ಬೆಳೆಸುತ್ತಾ ಬಂದರೆ ಜಾತೀಯ ಜಗಳಗಳು ಅತ್ತಿ ಹೂವಿನಂತೆ ಬಹಳ ಅಪರೂಪವಾಗಬಹುದು.

---

ಉಡುಪಿ ಶಿವಳ್ಳಿ ಬ್ರಾಹ್ಮಣರ ಹೊಟೆಲು ಇಲ್ಲದ ಊರೊಂದನ್ನು ತೋರಿಸಿಕೊಡುವವರಿಗೆ ಒಂದು ಸಾವಿರ ರೂಪಾಯಿ ಬಹುಮಾನ ಕೊಡುವೆವೆಂದುಧೈರ್ಯದಿಂದ ಹೇಳಬಹುದು

●

ಕೊಲಂಬಸನು ಅಮೇರಿಕಾ ಖಂಡಕ್ಕೆ ಹೋಗಿ ಅದನ್ನು ಕಂಡು ಹುಡುಕಿದ್ದು ತಾನೆಂದು ಹೆಮ್ಮೆ ಪಡುತ್ತಿದ್ದಾಗ ಅಲ್ಲಿ ಉಡುಪಿ ಶಿವಳ್ಳಿ ಬ್ರಾಹ್ಮಣರ ಕಾಫಿ ಹೊಟೆಲೊಂದು ಮೊದಲೇ ಇದ್ದದ್ದನ್ನು ಕಂಡು ನಾಚಿಕೆಗೊಂಡನು!

●

ಯುರೋಪಿನ ಜನರು ಕೆಲವರು ಹಿಮಾಲಯ ಪರ್ವತದ ಶಿಖರಕ್ಕೆ ಹತ್ತಿ ಇಷ್ಟು ಎತ್ತರವಾದ ಸ್ಥಳಕ್ಕೆ ಬಂದವರು ತಾವೆಂದು ಎಣಿಸುತ್ತಿದ್ದಾಗ ಅಲ್ಲಿಯೇ ಸ್ವಲ್ಪ ಮೇಲ್ಗಡೆ ಉಡುಪಿಯ ಶ್ರೀ ಕೃಷ್ಣ ವಿಲಾಸವೆಂಬ ಬೋರ್ಡು ಇರುವುದನ್ನು ನೋಡಿ ಗಾಬರಿಯಾದರು!

●

ಗಮನಿಸತಕ್ಕ ಚಿಕ್ಕ ವಿಷಯಗಳು.

# ಕಾಫಿಯೇ ಕಾಫಿ ಸರ್ವತ್ರ ಕಾಫಿ!

"ಗೆಳೆಯ"ನಿಂದ

ಪ್ರಿಯ ವಾಚಕನೇ,

ಕಾರಣಾಂತರಗಳಿಂದ ನಾನೊಮ್ಮೆ ಅಂತರಂಗಕ್ಕೆ ಬರೆಯುವುದನ್ನೆ ಬಿಟ್ಟುಬಿಟ್ಟೆನು. ಅಂತರಂಗದ ವಾಚಕರು ಕೆಲವರು ನನ್ನ ಲೇಖನಮಾಲೆಯನ್ನು ಮುಂದರಿಸಬೇಕೆಂದು ಪತ್ರ ಬರೆದಿರುವುದರಿಂದ ಪುನಃ ಬರೆಯಲು ಆರಂಭಿಸಿರುತ್ತೇನೆ. ಈ ಲೇಖನವು ಸರ್ವವ್ಯಾಪಿಯಾದ ಕಾಫಿಯ ವಿಷಯವಾಗಿ ಇದೆ.

ಕಾಫಿಯು ಈಗ ಎಲ್ಲೆಲ್ಲಿಯೂ ವ್ಯಾಪಿಸಿರುತ್ತದೆ. ಸಣ್ಣ ಮಗುವು 'ಅಮ್ಮ' ಎಂದು ಕರೆಯುವ ಮೊದಲೇ ಕಾಫಿ ಎನ್ನಲು ಕಲಿಯುತ್ತದೆ. ತಾಯಿಯ ಮೊಲೆ ಹಾಲಾದರೂ ತನಗೆ ಬೇಡ, ಕಾಫಿ ಬೇಕೆಂದು ಹಟ ಹಿಡಿಯುತ್ತದೆ. ದೊಡ್ಡ ಮಕ್ಕಳ ವಿಷಯ ಹೇಳುವುದೇನು? ಊಟವಾದರೂ ಬೇಡ, ಕಾಫಿ ಅವರಿಗೆ ಬೇಕು. ದೊಡ್ಡವರ ಮಟ್ಟಿಗೆ ದಿನಕ್ಕೆ ಎರಡು ಸಲ ಕಾಫಿ ಅಥವಾ ಚಾ ಕುಡಿಯದ ಮನುಷ್ಯರು ಈಗ ಭೂಲೋಕದಲ್ಲಿ ಇದ್ದಾರೋ ಎಂದು ನನಗೆ ಸಂದೇಹವಿದೆ. ಗಂಡಸರಾಗಲಿ ಹೆಂಗಸರಾಗಲಿ, ಪ್ರಾಯಸ್ಥರಾಗಲಿ, ಹಣ್ಣು ಮುದುಕರಾಗಲಿ, ದೊಡ್ಡವರಾಗಲಿ, ಬಡವರಾಗಲಿ, ಆರೋಗ್ಯವುಳ್ಳವರಾಗಲಿ, ರೋಗಿಗಳಾಗಲಿ– ಎಲ್ಲರೂ ಬೆಳಿಗ್ಗೆ ಒಮ್ಮೆ, ಸಾಯಂಕಾಲಕ್ಕೆ ಇನ್ನೊಮ್ಮೆ, ಕಾಫಿಅಥವಾ ಚಾ ಕುಡಿಯದವರೇ ಇಲ್ಲವೆಂದರೂ ಹೇಳಬಹುದು. ಹೆಂಗಸರ ಮಟ್ಟಿಗೆ ಬಡವರಲ್ಲಾದರೆ ಅವರಿಗೆ ಕಾಫಿ ದೊರೆಯದಿರಬಹುದು. ಗಂಡಸರಲ್ಲಿ ಆ ಭೇದವೇ ಇಲ್ಲ. ಬೀದಿಯಲ್ಲಿ ಬೇಡುವವನೂ ಒಂದು ಸಿಂಗಲ್ ಕಾಫಿಗೆ ಬೇಕಾದಷ್ಟು ಸಂಪಾದನೆಯಾದ ಕೂಡಲೆ ಆ ಹಣವನ್ನು ಕಾಫಿಯ ದೇವತೆಗೆ ಕಾಣಿಕೆ ಹಾಕಿ ಕೈ ಮುಗಿಯುವುದನ್ನು ಅನೇಕರು ನೋಡಿರಬಹುದು. ರೋಗಿಗಳ ಅನುಪಾನದ ವಿಷಯವಾಗಿ ಡಾಕ್ಟರರ ಹತ್ತಿರ ಕೇಳಿದರೆ ಯಾವ ಆಹಾರಕ್ಕೂ ಅವರ ಆಕ್ಷೇಪವಿದೆ. ಕಾಫಿಯಾಗದು ಎಂದು ಹೇಳಿದ ಡಾಕ್ಟರರನ್ನಾಗಲೀ ವೈದ್ಯರನ್ನಾಗಲೀ ನಾನು ನೋಡಲಿಲ್ಲ. ಅವರು ಕಾಫಿಯನ್ನು ಒಂದು ಔಷಧದ ಸಾಲಿಗೆನೇ ಸೇರಿಸಿಬಿಟ್ಟಿದ್ದಾರೆ. ಕಾಫಿಯ ಹೆಸರು ನಮ್ಮ ಶಾಸ್ತ್ರಗ್ರಂಥಗಳಲ್ಲಿ ಕಂಡುಬರುವುದಿಲ್ಲವೆಂಬುದರಿಂದ ಅದನ್ನು ಕುಡಿಯಬಹುದೋ ಎಂದು ನಮ್ಮ ಕಡು ಸನಾತನಿಗಳು ಮೊದಲು ಮೊದಲು ಸ್ವಲ್ಪ ಸಂಕೋಚದಲ್ಲಿದ್ದರು. ಈಗಲಂತೂ ಕಾಫಿಯು ಸನಾತನಧರ್ಮದ ಮೂಲಸ್ಥಾನದ ವರೆಗೂ ಹೋಗುತ್ತಿದೆ. ಯಾವ ಪುರಾಣದಲ್ಲಿ, ಸೂತ ಪುರಾಣಿಕರು ಶೌನಕಾದಿ ಮುನಿಗಳೊಡನೆ ಕಾಫಿಯ ಮಹಾತ್ಮೆಯನ್ನು ಹೇಳಿದ ವಿಷಯ ಕಂಡುಬಂತೋ, ಅಥವಾ ಯಾವ ಪವಿತ್ರವಾದ ಕ್ಷೀರದ ಸೇರುವಿಕೆಯಿಂದ ಕಾಫಿಯು ಸ್ವೀಕೃತವೆಂದು ಯಾವ ಆಚಾರ್ಯರು ಅಪ್ಪಣೆ ಕೊಡಿಸಿದರೋ ತಿಳಿಯದು! ಅಂತೂ ದೇವರ ಸಮರ್ಪಣೆಗೆಂದು ಕಾಫಿಯು ಈ ವರೆಗೆ ಬರಲಿಲ್ಲ ವಿನಹ ಇತರ ಎಲ್ಲಾ ಕಡೆಗಳಲ್ಲಿಯೂ ಅದಕ್ಕೆ ಸ್ವಾಗತವಿದೆ. ಉಸಿರು ಬಿಡುವಾಗಲೆಲ್ಲಾ 'ಕೃಷ್ಣಾ' ಎಂದು ಕೂಗುವ ಮುದಿ ವಿಧವೆಯರು ಕೂಡಈಗ ಕಾಫಿಗೆ ದೋಷವೇನು ಎನ್ನಹತ್ತಿದ್ದಾರೆ. ಅವರೂ ಬೀಜದ ಕಾಫಿಯಲ್ಲದಿದ್ದರೂ ಕೊತ್ತೊಂಬರಿ 'ಕಾಫಿ', ಜೀರಿಗೆ 'ಕಾಫಿ', ಸುಗಂಧಿ 'ಕಾಫಿ' ಹೀಗೆ ಸ್ವಲ್ಪ ವ್ಯತ್ಯಾಸವನ್ನು ಕಲ್ಪಿಸಿಕೊಂಡಾದರೂ ಎಲ್ಲರಂತೆಯೇ ತಾವೂ ಕಾಫಿಯ ಆರಾಧಕರೇ ಎಂದು ಜಗತ್ತಿಗೆ ಸಾರುತ್ತಿದ್ದಾರೆ. ಇದಕ್ಕಾಗಿಯೇ ಸರ್ವವ್ಯಾಪಿಯಾದ ಕಾಫಿಯೆಂದು ಹೇಳಿದೆ. ಕಾಫಿಯನ್ನು ಎಲ್ಲರೂ ಸೇವಿಸುತ್ತಾರೆ ಮಾತ್ರವಲ್ಲ ಅದು ದೊರೆ

ಯದ ಸ್ಥಳವಿಲ್ಲ. ಹಿಂದಿನ ಕಾಲದ ಜನರು ಊರಿಂದ ಊರಿಗೆ ನಡೆದುಕೊಂಡು ಹೋಗುತ್ತಿದ್ದಾಗ ಅವರ ಬಾಯಾರಿಕೆಯನ್ನು ತಣಿಸುವುದಕ್ಕಾಗಿ ಅಲ್ಲಲ್ಲಿ ಅರವಟ್ಟಿಗೆಗಳನ್ನು ಏರ್ಪಡಿಸಿ, ನೀರು ಇಡುವ ವ್ಯವಸ್ಥೆಯನ್ನು ಪುಣ್ಯಾತ್ಮರು ಮಾಡಿದ್ದರು. ಈಗ ಅವು ಯಾವುವೂ ಅವಶ್ಯವಿಲ್ಲ. ಪೇಟೆಗಳಲ್ಲಿಯೂ ಹಳ್ಳಿಗಳಲ್ಲಿಯೂ ಮನುಷ್ಯ ಸಂಚಾರವಿರುವ ಸಂದುಮೂಲೆಗಳಲ್ಲೆಲ್ಲಾ ದಾಹಶಾಂತಿಗೃಹಗಳೂ, ವಿಶ್ರಾಂತಿಭವನಗಳೂ, ಮನೋಹರ ವಿಲಾಸಗಳೂ, ಉಡುಪಿ ಹೊಟೇಲುಗಳೂ, ಶ್ರೀ ಕೃಷ್ಣಾ ರೆಸ್ಟೋರೆಂಟುಗಳೂ, ಅಪ್-ಟು-ಡೇಟ್ ಕೆಫೆಗಳೂ ತುಂಬಿಕೊಂಡಿವೆ. ನಮ್ಮ ಜಿಲ್ಲೆಯವರಂತೂ ಕಾಫಿ ಸ್ವಲ್ಪ ವೇಳ್ಗಡೆ ಉಡುಪಿಯ 'ಶ್ರೀ ಕೃಷ್ಣವಿಲಾಸ'ವೆಂಬ ಬೋರ್ಡು ಇರುವ ಹೊಟೆಲೊಂದನ್ನು ನೋಡಿ ಗಾಬರಿಯಾದರು- ಎಂದೆಲ್ಲಾ ಜನರು ತಮಾಷೆ ಮಾಡುವಷ್ಟು ನಮ್ಮ ಜಿಲ್ಲೆಯವರು ಭೂಲೋಕದಲ್ಲೆಲ್ಲಾ ಹೊಟೆಲನ್ನು ಹಬ್ಬಿಸಿಬಿಟ್ಟಿದ್ದಾರೆ. ಶ್ರೀ ಮನ್ಮಧ್ವಾಚಾರ್ಯರು ಉಡುಪಿಯ ಹೆಸರನ್ನು ದೇಶದಲ್ಲಿ ಪ್ರಸಿದ್ಧಿಪಡಿಸಿದ್ದಕ್ಕಿಂತಲೂ ಹೆಚ್ಚಾಗಿ ನಮ್ಮ ಜಿಲ್ಲೆಯ ಕಾಫಿ ಹೊಟೆಲಿನ ವ್ಯಾಪಾರದವರು ಉಡುಪಿಯ ಹೆಸರನ್ನು ಮುಂದೆ ತಂದಿರುವರು ಎಂದರೆ ತಪ್ಪಾಗದು. ಒಮ್ಮೆ ಮೈಸೂರಿನ ಒಂದು ಹಳ್ಳಿಯಲ್ಲಿ ನಾನು ತಿರುಗುತ್ತಿದ್ದಾಗ ಅಲ್ಲಿದ್ದ ಒಂದು ಉಡುಪಿ ಹೊಟೆಲನ್ನು ನೋಡಿ ನಮ್ಮೂರಿನವ



'ಉಡುಪಿಯಲ್ಲಿ ನಿಮಗೆಲ್ಲಿ ಸ್ವಾಮಿ'' ಎಂದು ಕೇಳಿದೆ. 'ಪಾಣೆಮಂಗಳೂರಲ್ಲಿ'' ಎಂದು ಉತ್ತರ ಕೊಟ್ಟುಬಿಟ್ಟ!

ಹೊಟೆಲಿನ ವ್ಯಾಪಾರದಲ್ಲಿ ಸಂಪೂರ್ಣತೆಯನ್ನೇ ಹೊಂದಿದ್ದಾರೆನ್ನಬಹುದು. 'ಉಡುಪಿ ಶಿವಳ್ಳಿ ಬ್ರಾಹ್ಮಣರ ಹೊಟೆಲು' ಇಲ್ಲದ ಊರೊಂದನ್ನು ತೋರಿಸಿಕೊಡುವವರಿಗೆ ಒಂದು ಸಾವಿರ ರೂಪಾಯಿ ಬಹುಮಾನ ಕೊಡುವೆವೆಂದು ಧೈರ್ಯದಿಂದ ಅಂತರಂಗದಲ್ಲಿ ಜಾಹೀರಾತು ಕೊಡಬಹುದು. ಕೊಲಂಬಸನು ಅಮೇರಿಕಾ ಖಂಡಕ್ಕೆ ಹೋಗಿ ಅದನ್ನು ಕಂಡುಹಿಡಿದವನು ತಾನೆಂದು ಹೆಮ್ಮೆಪಡುತ್ತಿದ್ದಾಗ ಅಲ್ಲಿ ಉಡುಪಿ ಶಿವಳ್ಳಿ ಬ್ರಾಹ್ಮಣರ ಕಾಫಿ ಹೊಟೆಲೊಂದು ಮೊದಲೇ ಇದ್ದುದನ್ನು ನೋಡಿ ನಾಚಿಕೆಗೊಂಡನು; ಯುರೋಪಿನ ಜನರು ಕೆಲವರು ಹಿಮಾಲಯ ಪರ್ವತದ ಶಿಖರಕ್ಕೆ ಹತ್ತಿ ಇಷ್ಟು ಎತ್ತರವಾದ ಸ್ಥಳಕ್ಕೆ ಬಂದವರು ತಾವೆಂದು ಎಣಿಸುತ್ತಿದ್ದಾಗ ಅಲ್ಲಿಯೆ ನೊಬ್ಬ ಸಿಕ್ಕಿದನೆಂದು ಸಂತೋಷದಿಂದ ಅವನ ಕೂಡೆ 'ಉಡುಪಿಯಲ್ಲಿ ನಿಮಗೆಲ್ಲಿ ಸ್ವಾಮಿ' ಎಂದು ಕೇಳಿದ್ದಕ್ಕೆ ಅವನು ಅರೆನಗೆಯಿಂದ 'ಪಾಣೆಮಂಗಳೂರಲ್ಲಿ'- ಎಂದು ಉತ್ತರಕೊಟ್ಟುಬಿಟ್ಟ. ಅದೇನು, ಹೊಟೆಲಿನವರಿಗೆ ಶ್ರೀ ಕೃಷ್ಣನ ಮೇಲೆ ಅಷ್ಟು ಭಕ್ತಿಯೋ, ನನಗೆ ತಿಳಿಯದು. ಶ್ರೀ ಕೃಷ್ಣನು ಗೋವುಗಳನ್ನು ಸಾಕಿಕೊಂಡು ಹಾಲುಸಮೃದ್ಧಿಯಾಗಿರುವಂತೆ ಮಾಡಿರುವುದರಿಂದ ಹಾಲಿನ ಸಹಾಯದಿಂದ ನಡೆಯುವ ಹೊಟೆಲಿನ ವ್ಯಾಪಾರಕ್ಕೆ ಶ್ರೀ ಕೃಷ್ಣನೇ ಮುಖ್ಯ ದೇವರೆಂದು ಹೊಟೆಲಿನವರು ತಿಳಿದು ಕೊಂಡಿರಬಹುದೋ ಏನೋ! ಇಲ್ಲದಿದ್ದರೆ ಜಿಲ್ಲೆಯ ಯಾವ ಭಾಗದವನೂ ಉಡುಪಿ ಹೊಟೆಲೆಂದು ಹೆಸರಿಡಲಿಕ್ಕೆ ಕಾರಣವೇನಿರಬಹುದು?

(ಮುಂದರಿಯುವುದು)

# ನೊಬೆಲ್ ಶಾಂತಿ ಬಹುಮಾನ

## ನಿರಾಶ್ರಿತರಿಗಾಗಿ ದುಡಿಯುತ್ತಿರುವ ನಾನ್ಸೆನ್ ಸಂಸ್ಥೆಗೆ ದೊರಕಿತು!

೧೯೩೮ರ ನೊಬೆಲ್ ಶಾಂತಿ ಬಹುಮಾನವು ಈ ಬಾರಿ ಒಂದು ಸಂಸ್ಥೆಗೆ ಕೊಡಲಾಗಿದೆ. ಯುದ್ಧಕಾಲಗಳಲ್ಲಿ ನಿರ್ಗತಿಕರಾದವರಿಗೂ, ಜರ್ಮನಿಯ ಅಸಂಖ್ಯಾತ ಯೆಹೂದಿಯರಿಗೂ ಆಶ್ರಯವನ್ನು ಕೊಡುತ್ತಿರುವ ನಾರ್ವೇ ದೇಶದ ನಾನ್ಸೆನ್ ಸಂರಕ್ಷಣಾ ಸಂಸ್ಥೆಯ ವ್ಯವಸ್ಥಾಪನಾ ಕಾರ್ಯವನ್ನು ಜನಾಂಗ ಸಭೆಯು ಕೈಗೊಂಡಿದೆ.

### ನಾನ್ಸೆನ್ ಸಂಸ್ಥೆಯ ಸಂಕ್ಷಿಪ್ತ ಪರಿಚಯ

●

**ಈ ವರುಷದ ನೊಬೆಲ್ ಶಾಂತಿ ಬಹುಮಾನ**

ಈ ವರುಷದ ನೊಬೆಲ್ ಶಾಂತಿ ಬಹುಮಾನವನ್ನು ಯಾರಿಗೆ ಕೊಡುವುದೆಂಬುದರ ಕುರಿತು ಸ್ವಲ್ಪ ಸಮಯದ ಹಿಂದೆ ದೊಡ್ಡ ಚರ್ಚೆಯೇ ತಲೆದೋರಿತ್ತು. ಬ್ರಿಟಿಷ್ ಪ್ರಧಾನರಾದ ಮಿ. ನೆವಿಲ್ ಚೇಂಬರ್ಲೆನರಿಗೆ ಸಲ್ಲಬೇಕೆಂದು ಕೆಲವರು ಸೂಚಿಸಿದರು. ಅದು ಹಿಟ್ಲರನಿಗೇ ಕೊಡಲ್ಪಡಬೇಕೆಂದು ಇನ್ನು ಕೆಲವರು ಪ್ರತಿಪಾದಿಸಿದರು. ಅಮೇರಿಕದ ಸೆಕ್ರೆಟರಿ ಆಫ್ ಸ್ಟೇಟ್ ಕಾರ್ಡೆಲ್ ಹಲ್‌ರವರಿಗೆ ಆ ಬಹುಮಾನವು ಹೋಗಬೇಕೆಂದು ಮತ್ತೆ ಕೆಲವರು ವಾದಿಸಿದರು. ಅಹಿಂಸೆಯ ಪ್ರವಾದಿಯೆನಿಸುವ ಭಾರತದ ಒಲವಿನ ಧುರೀಣರಾದ ಮಹಾತ್ಮಾ ಗಾಂಧಿಯವರಿಗೆ ನೊಬೆಲ್ ಶಾಂತಿ ಬಹುಮಾನವು ದೊರಕದೆ ಮತ್ತಾರಿಗೆ ಸಿಗುವುದೆಂದು ಅನೇಕ ಮಂದಿ ಸಕಾರಣವಾಗಿ ಚರ್ಚಿಸಿದರು. ಆದರೆ ನೋರ್ವೆಯ ಪಾರ್ಲಿಮೆಂಟು ಇವರೆಲ್ಲರನ್ನೂ ತತ್ಕಾಲಕ್ಕೆ ಮರೆತು ಒಬ್ಬೊಬ್ಬ ವ್ಯಕ್ತಿಗೆ ಕೊಡುವ ಬದಲು ನಿಜವಾಗಿಯೂ ಜಗತ್ತಿನ ಶಾಂತಿಗಾಗಿ ಹೋರಾಡಿರುವ ಒಂದು ಸಂಸ್ಥೆಗೆ ಈ ಬಾರಿ ಆ ಬಹುಮಾನ

**ಯೆಹೂದಿಯರಿಗೆ ಸಹಾಯ**



ಇಂಗ್ಲೆಂಡಿನ ಮಾಜಿಪ್ರಧಾನರಾದ ಲಾರ್ಡ್ ಬಾಲ್ಡ್ವಿನರ ಹೆಸರಿನಲ್ಲಿ ಯೆಹೂದೀ ನಿರ್ಗತಿಕರಿಗಾಗಿ ಇಂಗ್ಲೆಂಡಿನಲ್ಲಿ ದೊಡ್ಡ ನಿಧಿಯೊಂದು ಸಂಗ್ರಹವಾಗುತ್ತಿದೆ.

ವನ್ನು ಕೊಟ್ಟಿರುತ್ತದೆ.

೦೦

**ನಾನ್ಸೆನ್ ಸಂರಕ್ಷಣಾ ಸಂಸ್ಥೆ**

ಯುದ್ಧಕಾಲದಲ್ಲಿ ನಿರಾಶ್ರಿತರಾಗುವ ಸಾವಿರಾರು ಮಂದಿ ಬಡ ಜನರನ್ನು ಪ್ರತಿಯೊಂದು ರಾಷ್ಟ್ರದ ಸರಕಾರವು ಕಡೆಗಣಿಸುವುದರಿಂದ, ಅವರನ್ನು ಸಂರಕ್ಷಿಸುವುದಕ್ಕಾಗಿ ಪ್ರಸಿದ್ಧ ನ್ಯಾಯಾಧೀಶರಾದ ಮೈಕೆಲ್ ಹ್ಯಾನ್ಸನ್ ಎಂಬವರು ನಡೆಸುತ್ತಾ ಬಂದಿರುವ 'ನಾನ್ಸೆನ್ ಅಂತರ್‌ರಾಷ್ಟ್ರೀಯ ಸಂರಕ್ಷಣಾ ಸಂಘ'ವೆಂಬುದು ದುಡಿಯುತ್ತಾ ಬಂದಿದೆ. ಈ ಸಂಸ್ಥೆಯು ಕಳೆದ ಮಹಾಯುದ್ಧ ಕಾಲದಲ್ಲಿ ನಿರ್ವಾಸಿತರಾದ ಅನೇಕ ಮಂದಿಗೆ ಆಶ್ರಯವನ್ನಿತ್ತಿದೆ. ೧೯೩೦ರಲ್ಲಿ ಅದರ ಸಂಸ್ಥಾಪಕರಾದ ಡಾ. ಫ್ರಿಡ್‌ಜೋಫ್ ನಾನ್ಸೆನ್‌ರವರು ಕಾಲಾಧೀನರಾದಾಗ ಜನಾಂಗ ಸಭೆಯು ಡಾ. ನಾನ್ಸೆನರ ಅತ್ಯುಪಯುಕ್ತ ಕೆಲಸವನ್ನು ಮುಂದರಿಸುವುದಕ್ಕಾಗಿ ಆ ಕಾರ್ಯವನ್ನು ಕೈಗೊಂಡಿತು. ಈ ಸಂಸ್ಥೆಯ ಅಧ್ಯಕ್ಷರನ್ನು ಆರಿಸುವ ಹಕ್ಕು ಜನಾಂಗ ಸಭೆಯ ಎಸೆಂಬ್ಲಿಗಿದೆ. ಸಾರ್ ಪ್ರಾಂತ್ಯದ ಜರ್ಮನ್ ಚುನಾವಣೆಯಿಂದಾಗಿ ಅನೇಕರು ಅಲ್ಲಿಂದ ಹೊರಹೋಗಬೇಕಾದುದರಿಂದ ಅವರ ಹೊಣೆಗಾರಿಕೆಯನ್ನು

ಈ ಸಂಸ್ಥೆಯೇ ವಹಿಸಿತು. ಆಸ್ಟ್ರಿಯದಿಂದ ಮೊನ್ನೆಯ ಜರ್ಮನ್ ಗೊಂದಲದಿಂದಾಗಿ ಓಡಿಹೋದ ನೂರಾರು ಮಂದಿಗೂ ಈ ಸಂಸ್ಥೆಯು ರಕ್ಷಣೆಯನ್ನಿತ್ತಿದೆ. ೧೯೩೧ರಿಂದ ಇಂದಿನ ವರೆಗೆ ನಾನ್ಸೆನ್ ಸಂಸ್ಥೆಯು ೭೦೦,೦೦೦ ಮಂದಿಯನ್ನು ಸಂಬಂಧಪಟ್ಟ ದೇಶಗಳ ಯೋಗ್ಯ ನಿವಾಸಿಕರಾಗುವ ಏರ್ಪಾಡನ್ನೂ ಮಾಡಿರುತ್ತದೆ. ಈಗ ಜರ್ಮನಿಯಿಂದ ಹೊರಗೆ ಹಾಕಲ್ಪಡುತ್ತಿರುವ ಸಾವಿರಗಟ್ಟಲೆ ಯೆಹೂದಿಯರನ್ನು ಮತ್ತು ಸ್ಯುಡೇಟನ್ ಜರ್ಮನಿಯಿಂದ ಹೊರತಳ್ಳಲ್ಪಡುವವರನ್ನು ಈ ಸಂಸ್ಥೆಯು ಮಮತೆಯಿಂದ ಕಾಣಬೇಕಾಗಿದೆ.

೦೦

## ಹೊಸ ಮಾದರಿ.

ಮಾನವ ಜಾತಿಗೆ ಅತ್ಯುಪಯುಕ್ತವಾಗಿರುವ ಇಂಥ ಸಂಸ್ಥೆಗಳಿಗೆ ೪೧,೦೦೦ ಡಾಲರು (ಅಂದರೆ ಸುಮಾರು ೧೨,೩೦೦೦ ರೂಪಾಯಿ) ಬೆಲೆಬಾಳುವ ಈ ನೊಬೆಲ್ ಶಾಂತಿ ಬಹುಮಾನವನ್ನು ಕೊಡುವುದರಿಂದ ಹೆಚ್ಚಿನವರು ಜನತಾಸೇವೆಗೆ ತಮ್ಮ ಲಕ್ಷ್ಯವನ್ನೀಯುವಂತಾಗಬಹುದೆಂದು ನ್ಯಾಯಾಧೀಶ ಮ್ಯೈಕೆಲ್ ಹ್ಯಾನ್ಸೆನ್‌ರವರು ಮೊನ್ನೆ ಮಾಡಿದ ರೇಡಿಯೋ ಭಾಷಣದಲ್ಲಿ ಹೇಳಿದ್ದಾರೆ. ನಾನ್ಸೆನ್ ಸಂಸ್ಥೆಗೆ ಪಂಜಾಬಿನ ಮಾಜಿ ಗವರ್ನರರಾದ ಸರ್. ಹರ್ಬರ್ಟ್ ಎಮರ್ಸನ್ ಎಂಬವರನ್ನು ಜನಾಂಗ ಸಭೆಯ ಎಸೆಂಬ್ಲಿಯು ಮೊನ್ನೆ ಹೈಕಮಿಷನರನ್ನಾಗಿ ನೇಮಿಸಿದೆ.

## ಸಂಸ್ಥೆಯ ಭವಿಷ್ಯ

ಯುದ್ಧದ ಕಾರ್ಮೋಡಗಳು ಎಲ್ಲೆಲ್ಲಿಯೂ ಸುಳಿಯುತ್ತಿರುವ ಈ ಕಾಲದಲ್ಲಿ ಇಂತಹ ಸಂಸ್ಥೆಗಳಿರುವುದು ಅತ್ಯಾವಶ್ಯಕವಾಗಿದೆ. ಜಗತ್ತಿನ ಹೆಚ್ಚಿನ ಸರಕಾರಗಳು ಈ ಸಂಸ್ಥೆಯೊಡನೆ ಸಹಕರಿಸಲು ಒಪ್ಪಿರುವುದರಿಂದ ನಿರಾಶ್ರಿತರ ಸಮಸ್ಯೆಯನ್ನು ಬಿಡಿಸಲು ಈ ಸಂಸ್ಥೆಗೆ ಬಹಳ ಸಹಾಯಕಾರಿಯಾಗಬಹುದು. ಶಾಂತಿ ಬಹುಮಾನದ ವಿತರಣೆಯಲ್ಲಿ ರಾಜಕೀಯ ಶಕ್ತಿಯು ಹೇಳಿದಂತೆ ನಾರ್ವೆಯ ಪಾರ್ಲಿಮೆಂಟು ಕುಣಿದಿದ್ದರೆ ಶಾಂತಿ ಬಹುಮಾನವು ಈ ವರುಷ ಹಿಟ್ಲರರಿಗೋ ಅಥವಾ ಚೇಂಬರ್ಲೆನರಿಗೋ ಸಲ್ಲುತ್ತಿತ್ತು. ಪಾರ್ಲಿಮೆಂಟಿನವರು ಯಾರಾದರೊಬ್ಬ ವ್ಯಕ್ತಿಗೆ ಬಹುಮಾನ ಕೊಡದೆ ಉಪಯುಕ್ತವಾದೊಂದು ಸಂಸ್ಥೆಗೆ ಕೊಟ್ಟಿರುವುದು ಯೋಗ್ಯವಾದೊಂದು ಉಪಾಯವಾಗಿದೆ.

---

# ನಮಗೆ ಭಾಷಾವಾರು ಪ್ರಾಂತ್ಯರಚನೆಯೇಕೆ?- ಆಹಾರವೇ ಪ್ರಾಂತ್ಯರಚನೆಯ ಅಡಿಗಲ್ಲಾಗಿರಬೇಕು!

ಮೂಲಂಗಿಯನ್ನು ಸೀಳಿ ಮೇಜಿನ ಮೇಲಿಟ್ಟಾಗ ಕಣ್ಣೀರು ಸುರಿಸಿದ ಸಸ್ಯಾಹಾರಿ !

## ಸಮಗ್ರ ಭಾರತದಲ್ಲಿ ಮೂರೇ ಪ್ರಾಂತ್ಯಗಳು!

### ಏಕೀಕರಣ ಚಳುವಳಿದವರಿಗೊಂದು ಮಹತ್ವದ ಸೂಚನೆ

ಬರೆದವರು: "ರಾಜನೀತಿಜ್ಞ".

❖



ಜಾರ್ಜ್ ಬರ್ನಾರ್ಡ್ ಷಾರವರನ್ನು ಸಸ್ಯಾಹಾರ ಪ್ರಾಂತ್ಯದ ಗವರ್ನರರನ್ನಾಗಿ ಬ್ರಿಟಿಷ್ ಸರಕಾರವು ನೇಮಿಸಬೇಕು. ಈ ನೇಮಕವಾದರೆ ಮೂಲಂಗಿಗಳಿಗೆ ಸುಖವಾದೀತು.

**ಸ್ಫೂರ್ತಿ ಬಂದಳು, ಸ್ಫೂರ್ತಿ!**

ಹೌದು, ಏಕೀಕರಣದ ಕುರಿತು ಬರೆಯಬೇಕೆಂದು ಬಹುಕಾಲದಿಂದ ಯೋಚಿಸುತ್ತಾ ಬಂದಿದ್ದೆ. ಇಷ್ಟರ ತನಕ ಶುಭಕಾಲವು ದೊರಕಲೇ ಇಲ್ಲ. ಎಲ್ಲಾ ಮಹತ್ಕಾರ್ಯಗಳನ್ನು ಮಾಡಲು ಸ್ಫೂರ್ತಿಯು ಅತ್ಯವಶ್ಯಕವೆಂದು ಪ್ರತಿಯೊಬ್ಬರಿಗೂ ಗೊತ್ತಿದೆಯೆನ್ನಿ. ಅಂತಹ ಸ್ಫೂರ್ತಿದೇವಿ ಈ ತನಕ ನನ್ನ ಬಳಿಸಾರಲಿಲ್ಲ. 'ಈಗ ಬಂದಳೇ'? ಎಂದು, ನೀವು ಕೇಳಬಹುದು. ಹೌದು, ಬಂದೇ ಬಿಟ್ಟಳು. ಬರಿಯ ಭಾವನೆಯಲ್ಲಲ್ಲ. ಜೀವಂತವಾಗಿ ಬಂದು ನನ್ನೊಡನೆ ಜೀವಿಸುತ್ತಿದ್ದಾಳೆ. ಈ ಮಹತ್ವದ ವಾರ್ತೆಯನ್ನು ಕೇಳಿ ಕವಿಕುಲದವರು ಗೊಂದಲಮಾಡಬೇಕಾಗಿಲ್ಲ. ಆಕೆ ಬೇರೆ ಯಾರನ್ನೂ ವರಿಸಳು. ನನ್ನ ಹೃದಯಾಧಿದೇವತೆಯಾಗಿ ನನ್ನನ್ನು ಸಪ್ತಮಸ್ವರ್ಗದ ತೂಗುಯ್ಯಾಲೆಯಲ್ಲಿ ತೂಗುತ್ತಿದ್ದಾಳೆ.

೦೦ ೦೦ ೦೦

**ಏಕೀಕರಣ ಸಮಸ್ಯೆ**

ಮೇಲಿನ ವಾಕ್ಯಗಳನ್ನೋದಿದೊಡನೆಯೇ ಕವಿರವೀಂದ್ರರ ಗೀತಾಂಜಲಿಯೆಂದು ಹೆದರಬೇಡಿ. ಅಂತಹ ತತ್ವಗಳನ್ನು ಪ್ರತಿವಾದಿಸುವಷ್ಟು ಕೆಟ್ಟಬುದ್ಧಿಯು ನನ್ನ ಬಳಿಗೆ ಬರುವಂತಿಲ್ಲ. ವಿಶದವಾಗಿ ಹೇಳುವುದಿದ್ದರೆ ನನ್ನ ಮನೆಗೆ ಪ್ರೇಮ ದೇವತೆಯು ಬಂದಿದ್ದಾಳೆ. ಈ ಲೇಖನವನ್ನು ಬರೆಯುವುದಕ್ಕೆ ಆಕೆಯೇ ಕಾರಣ. ನನ್ನೊಲವಿನ ಶಾಂತಿ ನಿನ್ನೆ ಬಹಳ ರುಚಿಕರವಾದ ಮೇಲೋಗರವನ್ನು ಮಾಡಿ ಬಡಿಸಿಬಿಟ್ಟಳು. ಆಕೆ ಸಮೀಪದಲ್ಲಿ ಕುಳಿತುಕೊಂಡು ಮಾತಾಡುತ್ತಿರುವಾಗ ಎಂತಹ ಭಕ್ಷ್ಯವೂ ರುಚಿರುಚಿಯಾಗಿ ಕಾಣಬಹುದೆಂಬುದರಲ್ಲಿ ನಿಮಗೆ ಸಂಶಯವಿದೆಯೆ? ಸರಿ.

ಬೆಂಡೆಕಾಯಿಯು ಆ ವೋಲೋಗರಕ್ಕೂ ಪ್ರಾಂತ್ಯಗಳ ಏಕೀಕರಣಕ್ಕೂ ಸಂಬಂಧವೇನಿದೆಯೆಂದು

**ಸಸ್ಯಾಹಾರಿಗಳ ಪ್ರಾಂತ್ಯದಲ್ಲಿ-**



ಕಾಣಸಿಗಬಹುದಾದ ಸಾಮಾನ್ಯ ದೃಶ್ಯವಿದು. ಪ್ರಭಾತ ಕಂಪೆನಿಯ ವಿನೋದ ರತ್ನ ಬುಪ್ಪಾ ಸಾಹೇಬರ ಹೊಟ್ಟೆಯೊಡನೆ ಸ್ಪರ್ಧಿಸುವ ಹೊಟ್ಟೆಗಳು ಆ ಪ್ರಾಂತ್ಯದಲ್ಲಿ ತಲೆದೋರಿ ಭಾರತವರ್ಷದ ಉದ್ಧಾರವಾಗುವುದು.

ಯೋಚಿಸತೊಡಗಿ ನನ್ನ ಬುದ್ಧಿಯ ಕುರಿತು ನೀವು ಅನ್ಯಥಾ ಭಾವಿಸಬಾರದೆಂದು ಇಗೊಳ್ಳಿ, ನನ್ನ ವಾದವನ್ನು ಪ್ರಾರಂಭಿಸಿಯೇ ಬಿಡುತ್ತೇನೆ:—

೦೦ ೦೦ ೦೦

**ಆಹಾರವಾರು ಪ್ರಾಂತ್ಯರಚನೆ.**

ಭಾಷಾವಾರು ಪ್ರಾಂತ್ಯ ರಚನೆ ಮಾಡಬೇಕೆಂದು ಹೇಳುವುದು ನನ್ನ ದೃಷ್ಟಿಯಲ್ಲಿ ಅಷ್ಟೊಂದು ಸರಿಯೆನಿಸುವುದಿಲ್ಲ. ಹೀಗೆಂದೊಡನೆಯೇ ಕರ್ನಾಟಕ ಏಕೀಕರಣ ಚಳವಳದವರು ನನ್ನ ಮೇಲೆ ಉರಿದೇಳಬಾರದು. ಯಾವುದಾದರೊಂದು ಚಳವಳವನ್ನು ನಡೆಸುವ ಮೊದಲು ನಾವು ಆ ಕುರಿತು ಕೂಲಂಕಷವಾಗಿ ವಿಚಾರಿಸಬೇಕು. ಕರ್ನಾಟಕ ಏಕೀಕರಣ ಚಳವಳವು ನ್ಯಾಯಸಮ್ಮತವಲ್ಲವೆಂದು ನಾನು ಸರ್ವಥಾ ಹೇಳುಲಾರೆ. ಭಾಷಾವಾರು ಪ್ರಾಂತ್ಯಗಳಿಂದ ರಾಷ್ಟ್ರೀಯ ಐಕ್ಯಕ್ಕೆ ನಿಜವಾಗಿಯೂ ಬಹಳ ಪ್ರಯೋಜನವಿದೆ. ಆದರೆ ಪ್ರಾಂತ್ಯಗಳನ್ನು ಭಾಷೆಯ ತಳಹದಿಯ ಮೇಲೆ ಕಟ್ಟುವುದರಲ್ಲಿ ಅರ್ಥವಿಲ್ಲ. ಒಂದುವೇಳೆ ಕಟ್ಟಿದರೆ ಆ ಕಟ್ಟಡದ ಅಂತಸ್ತು, ಅಭಿಪ್ರಾಯ ವ್ಯತ್ಯಾಸಗಳ ಬಿರುಗಾಳಿಯ ಸೆಳೆತಕ್ಕೆ ಸಿಲುಕಿ ಬಿದ್ದು ನುಚ್ಚುನೂರಾಗಬಹುದು. ಹಾಗಾದರೆ ಪ್ರಾಂತೀಕರಣವು ಯಾವ ಆಧಾರದ ಮೇಲೆ ನಡೆಯಬೇಕು? ಎಂದು ನೀವು ಪ್ರಶ್ನಿಸಬಹುದು.

೦೦ ೦೦ ೦೦

**ಗೇಣು ಹೊಟ್ಟೆ!**

ಈ ಪ್ರಶ್ನೆಗೆ ನಾನು ಸಮರ್ಪಕವಾದ ಉತ್ತರವನ್ನು ಕೊಡಬೇಕಾಗಿದೆ. ಮೊತ್ತಮೊದಲು ನಿಮ್ಮೊಡನೊಂದು ಪ್ರಶ್ನೆ ಕೇಳುತ್ತೇನೆ. ಮಾನವ ಜಾತಿಯು ಕಷ್ಟಪಟ್ಟು ಕೆಲಸ ಮಾಡುವುದೇಕೆ? ರಾಷ್ಟ್ರೀಯ ಕಾಂಗ್ರೆಸು ಅಹೋರಾತ್ರಿ ದುಡಿಯುವುದೇಕೆ? ಎಲ್ಲರ ಸುಖ ಸಂತೋಷಕ್ಕಾಗಿ, ಶಾಂತಿಗಾಗಿ, ಸೌಹಾರ್ದಕ್ಕಾಗಿ! ಆದರೆ ಇವೆಲ್ಲವೂ ಉಂಟಾಗಬೇಕಾದರೆ ಮೊದಲು ಉದರ ಶಾಂತಿಯಾಗಬೇಕೆಂದು ಹೊಟ್ಟೆಯಿರುವ ಪ್ರತಿಯೊಬ್ಬ ವ್ಯಕ್ತಿಯೂ ಒಪ್ಪಿಕೊಳ್ಳಲೇಬೇಕು. ಉದರ ಸಾಮ್ರಾಜ್ಯದಲ್ಲಿ ಕ್ಷುಧಾಮೂರ್ತಿಯು ಪ್ರಲಯತಾಂಡವನೃತ್ಯ ಮಾಡುತ್ತಿದ್ದರೆ ತತ್ವ, ಕಲೆ, ಸಾಹಿತ್ಯ ಮೊದಲಾದ ವಿಚಾರಗಳು ಯಾರಿಗೆ ಬೇಕು? ಇದನ್ನು ಸಮರ್ಥಿಸಲು ನಾನು ಯಾವ ಮಹಾತ್ಮನ ಮಾತನ್ನೂ ಉದಾಹರಿಸಬೇಕಾಗಿಲ್ಲ. ಸಮಗ್ರ ಜಗತ್ತೇ 'ಒಂದು ಗೇಣು ಹೊಟ್ಟೆಗಾಗಿ' ಚಡಪಡಿಸುತ್ತಿರುವಾಗ ಎಲ್ಲಾ ವಿಚಾರಗಳಿಗೂ ಅದೇ ಮೂಲಸ್ಥಾನವೆಂದಾಯಿತು. ಭಾಷೆ, ಕಲೆ, ಸಂಸ್ಕೃತಿಗಳಿಗೆ ಆಹಾರದಷ್ಟು ಪ್ರಾಮುಖ್ಯಸ್ಥಾನವಿಲ್ಲ. ವಸ್ತು

**ಉದಗಪ್ರಧಾನ ಶರೀರ**



'ಎಲ್ಲರೂ ಮಾಡುವುದು ಗೇಣು ಹೊಟ್ಟೆಗಾಗಿ' ಎಂಬ ಸಾಮಾನ್ಯ ತತ್ವವನ್ನು ಮಾನ್ಯಮಾಡಿ ಉದರ ವೈಭವವನ್ನು ತೋರಿಸಬಹುದಾದ ಸಸ್ಯಾಹಾರ ಪ್ರಾಂತ್ಯದ ನಸ್ಯಸೇದುವ ಒಬ್ಬ ಪ್ರಜೆ!

ಸ್ಥಿತಿಯು ಹೀಗಿರುವಾಗ ಪ್ರಾಂತ್ಯರಚನೆಯನ್ನು ಭಾಷೆಗಳ ಆಧಾರದ ಮೇಲೆ ಮಾಡುವುದಾದರೂ ಹೇಗೆ?

ಇದಕ್ಕಾವ ನ್ಯಾಯವಿದೆ? ಕರ್ನಾಟಕಾಂಧ್ರ ಕೇರಳ ತಮಿಳು ಮೊದಲಾದ ಏಕೀಕರಣ ಚಳವಳಗಾರರು ಈ ಪ್ರಾಮುಖ್ಯ ವಿಷಯಕ್ಕೆ ತಮ್ಮ ಲಕ್ಷ್ಯವನ್ನಿತ್ತಿರುವರೆ? ಅಖಿಲ ಭಾರತ ಕಾಂಗ್ರೆಸು ಈ ವಿಚಾರಕ್ಕೆ ತನ್ನ ಗಮನವನ್ನಿತ್ತಿರುವುದೆ? ಅಂಕೆಯಿಲ್ಲದ ಠರಾವುಗಳು, ಸಭೆಗಳಿಂದ ಮಳೆನೀರಿನಂತೆ ಸುರಿಯುತ್ತಿರುವಾಗ ಈ ಕುರಿತು ಒಂದೇ ಒಂದು ಠರಾವಾದರೂ ಮಾಡಲ್ಪಟ್ಟಿರುವುದೇ?

೦೦ ೦೦ ೦೦

**ಮೂರೇ ಪ್ರಾಂತ್ಯಗಳು!**

ಕಾಂಗ್ರೆಸಿನವರು ಭಾಷಾವಾರು ಪ್ರಾಂತ್ಯ ರಚನೆಯನ್ನು ಮಾಡುವ ಚಟುವಟಿಕೆಯನ್ನು ನಿಲ್ಲಿಸಿ ಬಿಡುವ ಕಾಲವು ಬಂದುಬಿಟ್ಟಿದೆ. ಭಾರತದ ಎಲ್ಲಾ ಪ್ರಾಂತ್ಯಗಳು ಆಹಾರದ ಆಧಾರಗಳ ಮೇಲೆ ನಿರ್ಮಿಸಲ್ಪಡಬೇಕು. ಇಂತಹ ಚಳವಳವು ಪ್ರಾರಂಭವಾದರೆ ನಮ್ಮ ದೇಶದಲ್ಲಿ ಆಗಾಗ ತಲೆಯೆತ್ತಿ ತಮ್ಮ ಕೊಳಕು ರೂಪವನ್ನು ತೋರಿಸುತ್ತಿರುವ ಜಾತೀಯ ಸಮಸ್ಯೆಗಳನ್ನು ಮಣ್ಣುಪಾಲು ಮಾಡಬಹುದು. ವಿವರಿಸಿ ಹೇಳುವುದಿದ್ದರೆ ಒಂದೇ ವಿಧದ ಆಹಾರ ತಿನ್ನುವವರನ್ನು ಒಂದೇ ಪ್ರಾಂತ್ಯದ ಪ್ರಜೆಗಳನ್ನಾಗಿ ಮಾಡಬೇಕು. ಹೀಗೆ ಮಾಡಿದರೆ ಭಾರತದಲ್ಲಿ ಈಗಿನಂತೆ ೧೧ ಪ್ರಾಂತ್ಯಗಳಿರಬೇಕಾಗಿಲ್ಲ. ಕೇವಲ ಮೂರು ಪ್ರಾಂತ್ಯಗಳಿದ್ದರೆ ಸಾಕು. ಅವಾವುವೆಂದರೆ—

ಸಸ್ಯಾಹಾರಿಗಳ ಪ್ರಾಂತ್ಯ.
ಮಾಂಸಾಹಾರಿಗಳ ಪ್ರಾಂತ್ಯ.
ಸಸ್ಯ-ಮಾಂಸಾಹಾರಿ ಪ್ರಾಂತ್ಯ.

೦೦ ೦೦ ೦೦

**ಸಸ್ಯಾಹಾರ ಪ್ರಾಂತ್ಯದ ಸಾರ್ವಜನಿಕ ಉಪದ್ರವವಿದು!**



ಸರ್ ಸಿ. ವಿ. ರಾಮನ್‌ರವರು ಕೇವಲ "ಸಾರು" ಮೊದಲಾದುವುಗಳನ್ನುಂಡು ಅಷ್ಟು ದೊಡ್ಡ ವೈಜ್ಞಾನಿಕರಾದರೆಂದು ರಾಜಾಜಿಯವರು ಆಶ್ಚರ್ಯಪಟ್ಟರು. 'ಸಾರು ಪ್ರಧಾನ'ವಾದ ಸಸ್ಯಾಹಾರ ಪ್ರಾಂತ್ಯದಲ್ಲಿ ಬಾಳೆ ಹಣ್ಣಿನ ಸಿಪ್ಪೆಯ ಮೇಲೆ ಕಾಲಿಟ್ಟರೆ ಜಾರಿ ಬೀಳದಂತೆ ಮಾಡುವ ಉಪಾಯವನ್ನು ವೈಜ್ಞಾನಿಕರು ಮುಂದೆ ಕಂಡುಹಿಡಿಯ ಬೇಕಾದೀತು.

**ಸಸ್ಯಾಹಾರಿ ಪ್ರಾಂತ್ಯ.**

ಸಸ್ಯಾಹಾರಿಗಳ ಪ್ರಾಂತ್ಯ! ಈ ಪ್ರಾಂತ್ಯಕ್ಕೆ ಕೇವಲ ಸಸ್ಯಾಹಾರವನ್ನು ತಿಂದು ಬದುಕುವವರು ಸೇರುತ್ತಾರೆ. ಉದಾಹರಣೆಗಾಗಿ ಮಹಾತ್ಮಾ ಗಾಂಧಿಜಿಯವರೂ ಈ ಪ್ರಾಂತ್ಯಕ್ಕೆ ಸೇರಬೇಕು. ಈ ಪ್ರಾಂತ್ಯದಲ್ಲಿ ಸೋಯಾಬೀಜದಿಂದ ಮೊದಲ್ಗೊಂಡು ರಾಗಿಯ ವರೆಗೆ ಎಂತಹ ದವಸ ಧಾನ್ಯಗಳನ್ನು ಉಪಯೋಗಿಸಬಹುದು. ಈ ಪ್ರಾಂತ್ಯದಲ್ಲಿ ಸತ್ಯ, ಅಹಿಂಸೆ ಮೊದಲಾದುವುಗಳಿಗೆ ಯಾವ ತೊಂದರೆಯೂ ಬರುವಂತಿಲ್ಲ. ಭಾರತಕ್ಕೆ ಸಂಬಂಧಿಸಿದ ಎಲ್ಲಾ ಬೌದ್ಧಿಕ ವಿಚಾರಗಳ ಹೊಣೆಗಾರಿಕೆಯನ್ನು ಈ ಪ್ರಾಂತ್ಯವೇ ವಹಿಸಬೇಕು. ಸಾಹಿತ್ಯ, ಕಲೆ, ಸಂಸ್ಕೃತಿಗಳಿಗೆ ಸಂಬಂಧಪಟ್ಟ ಎಲ್ಲಾ ಪತ್ರಿಕೆಗಳು ಇಲ್ಲಿಂದ ಹೊರಡಬೇಕು. ಎಲ್ಲಾ ಭಾಷಣಗಳು ಈ ಪ್ರಾಂತ್ಯದಲ್ಲಿ ಮಾಡಲ್ಪಡಬೇಕು.

**ಮಾಂಸಾಹಾರಿ ಪ್ರಾಂತ್ಯ!**

ಈ ಪ್ರಾಂತ್ಯದಲ್ಲಿ ಯಾವತ್ತೂ ಸಸ್ಯಗಳನ್ನು ಬೆಳೆಸಬಾರದು. ಸಮಗ್ರ ಭಾರತದ ಹುಲಿ, ಕರಡಿ, ಸಿಂಹ, ಆನೆ ಮೊದಲಾದ ವನ್ಯ ಜಂತುಗಳನ್ನು ಇಲ್ಲಿಗೆ ಕಳುಹಿಸಬೇಕು. ಈಗ ಬಂಗಾಳದಲ್ಲಿರುವ ಪ್ರಧಾನ ಮಂತ್ರಿಗಳಾದ ಮಿ| ಫಜ್ಲುಲ್ ಹಕ್ಕರನ್ನು ಈ ಪ್ರಾಂತ್ಯಕ್ಕೆ ಕಳುಹಿಸಲೇ ಬೇಕು. "ನಾವು ಹುಲಿಗಳು, ನಾವು ಸಿಂಹಗಳು" ಎಂದು ಅವರು ಅಧಿಕಾರವಾಣಿಯಿಂದ ಹೇಳುವಂತಾಗಬೇಕು. ಹೆಚ್ಚೇಕೆ? "ನಾವು ಹುಲಿಗಳು, ಕರಡಿಗಳು, ಸಿಂಹಗಳು, ಆನೆಗಳು, ಚಿರತೆಗಳು, ಕೋಣ, ಆಡುಗಳು, ಕುರಿ, ಕೋತಿ

ಗಳು" ಎಂದು ಹೇಳುವಂತಾಗ ಬೇಕು. ಮಿ। ಜಿನ್ನರನ್ನು ಈ ಪ್ರಾಂತ್ಯಕ್ಕೆ ಕಳುಹಿಸಬಹುದು. ಅವರು ಅಗ್ನಿ ನುಂಗುವವರು! ಮಾಂಸಾಹಾರಿಗಳಾದರೂ ಪೊಮ್ಮೆ ಬೆಂಕಿ ನುಂಗಿದರೆ ಅವರನ್ನು ಕ್ಷಮಿಸ ಬೇಕು ಸರ್ ಸಿಕಂದರ್ ಹಯಾತ ಖಾನರು ಇಲ್ಲಿಗೆ ಬರಬೇಕು. ಭಾರತ ದಲ್ಲಿರುವ ಎಲ್ಲಾ ಯುರೋಪಿಯ ವರು ಈ ಪ್ರಾಂತ್ಯದ ಹುಲಿ ಕರಡಿ ಗಳೊಡನೆ ವಾಸಿಸಬೇಕು. ಭಾರತ ಕ್ಕಾಗಿ ಹೋರಾಡುವುದೇ ಈ ಪ್ರಾಂತ್ಯದವರ ಕೆಲಸ. ಮೊದಲು ಕ್ಷತ್ರಿಯರಿದ್ದಂತೆ ಇವರು ಸಮರ ಮಲ್ಲರಾಗಬೇಕು. ಈ ಪ್ರಾಂತ್ಯಕ್ಕೆ ಸತ್ಯ, ಅಹಿಂಸೆ ಮೊದಲಾದ ತತ್ವ ಗಳು ಅನ್ವಯಿಸಲು ಶಕ್ಯವಿಲ್ಲ. ಮದ್ಯಪಾನ ನಿಷೇಧ ಮಸೂದೆ ಈ ಪ್ರಾಂತ್ಯದಲ್ಲಿ ನಡೆಯಲಿಕ್ಕಿಲ್ಲ!

೦೦ ೦೦ ೦೦

**ಸಸ್ಯ ಮಾಂಸಾಹಾರಿ ಪ್ರಾಂತ್ಯ.**

ಇದೊಂದು ವಿಚಿತ್ರ ರೀತಿಯ ಪ್ರಾಂತ್ಯ. ಅನ್ನ ಅಥವಾ ಗೋದಿ ಯೊಡನೆ ಮಾಂಸದ ಮೇಲೋಗರ ವನ್ನು ತಿನ್ನುವುದು ಈ ಪ್ರಾಂತ್ಯದ ರೂಢಿಯಾಗಬೇಕು. ಸಾಧ್ಯವಿಲ್ಲದ ಸಂದರ್ಭಗಳಲ್ಲಿ ಸತ್ಯಮತ್ತುಅಹಿಂಸೆ. ಬೇರೆ ಕಾಲಗಳಲ್ಲಿ ದೊಣ್ಣೆ ಶಾಸ್ತ್ರ- ಇದೇ ಇವರ ತತ್ವ. ಇದು ಎಲ್ಲಾ ತರದ ಮಿಶ್ರಣಗಳತವರುಮನೆಯಾ ಗಿರಬೇಕು. ದಶಮೂಲ ಮಿಶ್ರಣ ಗಳಿಂದ ಮೊದಲ್ಗೊಂಡು ಮಿಶ್ರ ವಿವಾಹಗಳಿಗೆ ಕೂಡಾ ಈ ಪ್ರಾಂತ್ಯ ದಲ್ಲಿ ಎಡೆಯಿರಬೇಕು.

೦೦ ೦೦ ೦೦

**ಚುನಾವಣೆಗಳು.**

ಸಸ್ಯಾಹಾರಿ ಪ್ರಾಂತ್ಯದಲ್ಲಿ ಉಮೇದ್ವಾರರು ಕುಂಬಳ, ಸೌತೆ, ಬೆಂಡೆ, ಅಳಸಂಡೆ, ಹೀರೆ ಇತ್ಯಾದಿ ಕಾಯಿಗಳನ್ನು ತಮ್ಮಗುರುತಾಗಿಆರಿ ಸಿಕೊಳ್ಳಬಹುದು. ಮಾಂಸಾಹಾರಿ ಪ್ರಾಂತ್ಯದಲ್ಲಿ ಹುಲಿ, ಸಿಂಹ, ಕರಡಿ, ತೋಳ, ನರಿ ಮೊದಲಾದುವುಗಳನ್ನು ತಮ್ಮ ಚಿಹ್ನೆಗಳಾಗಿ ಆರಿಸಿಕೊಳ್ಳ ಬಹುದು. ಮಿಶ್ರಪ್ರಾಂತ್ಯದವರು ಎಂಥವುಗಳನ್ನೂ ಆರಿಸಬಹುದು.

೦೦ ೦೦ ೦೦

**ಕೊನೆಯ ವಾದ.**

ಈ ಯೋಜನೆಯನ್ನು ಜಾರಿಗೆ ತಂದರೆ ಭಾರತದಲ್ಲಿ ರಾಮರಾಜ್ಯ ದಿಂದ ಮೊದಲ್ಗೊಂಡು ಸೋವಿ ಯೆಟ್ ರಾಜ್ಯವನ್ನೂ ಜಾರಿಗೆ ತರ ಬಹುದಾಗಿದೆ. ಈ ರೀತಿಯ ಪ್ರಾಂತ್ಯ ಗಳ ರಚನೆಯಾದರೆ ಪರಸ್ಪರ ಪ್ರೇಮ ಸೌಹಾರ್ದಗಳು ನೆಲೆಸಿ ಲೋಕ ಶಾಂತಿಯಾಗಬಹುದು. ನನ್ನೀ ಸೂಚನೆಯು ಮಾನ್ಯಮಾಡಲ್ಪಟ್ಟರೆ ನಾನು ಧನ್ಯನಾಗುವೆನಲ್ಲದೆ 'ಏಕೀ ಕರಣ ಪಿತಾಮಹ'ನೆಂಬ ಕೀರ್ತಿಗೆ ಪಾತ್ರನಾಗಿ, ಹಿಮಾಲಯಕ್ಕೆ ಹೋಗಿ ಅಲ್ಲಿಯೂ ಏಕೀಕರಣ ಕಾರ್ಯವನ್ನು ನಡೆಸಲಿದ್ದೇನೆ.

---

# ನಿಶಾಮಂದಿರದಲ್ಲಿ ಶರೀರ : : : : : ಸೌಂದರ್ಯ ಪ್ರದರ್ಶನ

ಪ್ಯಾರಿಸಿನ ಉದ್ಯಾನದಲ್ಲಿ



ದೇಹ ಸೌಂದರ್ಯ ಪ್ರದರ್ಶನ

## ಮದಿರೋನ್ಮತ್ತ ಜನರ ಕಾಮ ವಿಕಾರಗಳು.

ಪ್ಯಾರಿಸಿನ ಕಲಾವೈಭವವನ್ನು ಕಾಣಲೆಂದು ಹೋದವನು ವ್ಯಭಿಚಾರಮಂದಿರದಲ್ಲಿ ನಡೆಯುತ್ತಿದ್ದ ಅಸಹ್ಯ ದೃಶ್ಯಗಳನ್ನು ಕಂಡಿರುವ ಕುರಿತು ಈ ಮೊದಲೇ ಬರೆದಿದ್ದೇನೆ ಪಾಪದಭಯಾನಕ ದೃಶ್ಯಗಳನ್ನು ತೋರಿಸಿದ ತರುಣಿಯಿಂದ ಹೇಗಾದರೂ ತಪ್ಪಿಸಿಕೊಂಡು "ಕಾಫೆ ಬ್ಯೂಟಿಫುಲ್"ನಿಂದ ಪಾರಾದೆ. ಆ ಬಳಿಕ ನಾನು ಕಂಡಿರುವ ಸ್ವಾರಸ್ಯದ ಸಂಗತಿಗಳನ್ನು ಹೇಳುತ್ತೇನೆ.

ಪಾಶ್ಚಾತ್ಯ ದೇಶಗಳಲ್ಲಿ ನಿಶಾಮಂದಿರಗಳು ಅತ್ಯಧಿಕವಾಗಿವೆ ಎಂದು ನಿಮಗೆ ಚೆನ್ನಾಗಿ ತಿಳಿದಿರಬಹುದು. ಇಂಗ್ಲೆಂಡ್, ಅಮೇರಿಕಾ ಮೊದಲಾದ ದೇಶಗಳಲ್ಲಿ ನಿಶಾಮಂದಿರಗಳು ಅಳಿಂಬೆಗಳಂತೆ ತಲೆದೋರಿ ಅವುಗಳಂತೆಯೇ ತಮ್ಮ ಅವಸಾನವನ್ನು ಹೊಂದುತ್ತವೆ. ಇಂದಿನ ಮಂದಿರಗಳು "ರೆಡ್ ಸಿಟಿ" ಯಲ್ಲಿ ಧಾರಾಳವಾಗಿವೆಯೆಂದು ನಾನು ಮೊದಲೇ ಕೇಳಿದ್ದೆ. ಅಲ್ಲಿಗೆ ಹೋಗಿ, ಆ ಮಂದಿರಗಳಲ್ಲಿ ಎಂತಹ ಅತ್ಯಾಚಾರಗಳು ನಡೆಯುತ್ತವೆ ಎಂಬಿವೇ ಮೊದಲಾದ ವಿವರಗಳನ್ನು ತಿಳಿಯಬೇಕೆಂಬ ಆತುರವು ನನ್ನಲ್ಲಿತ್ತು. ಆದರೆ ಅವುಗಳಿಗೆ ಹೋಗುವುದಾದರೂ ಹೇಗೆ? ಹೊರಗಿನಿಂದ ನೋಡುವಾಗ ಪ್ರತಿಯೊಬ್ಬರೂ ಸಭ್ಯರಂತೆ ಕಾಣುತ್ತಾರೆ. ಯಾರೊಡನಾದರೂ ಕೇಳುವೆನೆಂದರೆ ಆ ಅಶ್ಲೀಲ ಪ್ರಶ್ನೆಯನ್ನು ಕೇಳಲು ನನಗೆ ಸಾಧ್ಯವಾಗಲಿಲ್ಲ.

ಸಾಯಂಕಾಲ ಸೀನ್ ನದಿಯು ದಡದಲ್ಲಿ ಸಾವಿರಾರುಮಂದಿ ಕುಳಿತಿದ್ದರು. ಕಾರಖಾನೆಗಳ ಕಶ್ಮಲ ಮಿಶ್ರಿತವಾದ ಆ ನದಿಯ ನೀರು ಕಪ್ಪುಕಪ್ಪಾಗಿತ್ತು. ಗಾಳ ಹಾಕುತ್ತಿದ್ದ ಮುದುಕನೊಬ್ಬನ ಬಳಿಯಲ್ಲಿ ನಾನು ನಿಂತಿದ್ದೆ. ಎದೆಯಲ್ಲಿ ಒಂದಿನಿತು ಬಟ್ಟೆಯಿಲ್ಲದ ನೀರೆಯೊಬ್ಬಳು ನನ್ನನ್ನು ದೂಡುತ್ತಾ ಮುನ್ನಡೆದಳು. ಪಾಶ್ಚಾತ್ಯ ನಾಗರಿಕತೆಯ

ಪರಿಣಾಮವೆಂದು ಭಾವಿಸಿ ಸುಮ್ಮಗಾದೆ. ನಾಲ್ಕೈದು ನಿಮಿಷಗಳು ಕಳೆದಿರಬಹುದು. "ಗುಡ್‌ಈವ್ನಿಂಗ್", "ಗುಡ್‌ಈವ್ನಿಂಗ್" ಎಂದು ನಾನೂ ನಮಸ್ಕರಿಸಿದೆ. ಇಂಗ್ಲಿಷ್ ಬಲ್ಲ ಆ ವ್ಯಕ್ತಿಯನ್ನು ಕಂಡು ಸಂತೋಷವಾಯಿತು. ನಾವು ಪರಸ್ಪರ ಪರಿಚಯ ಮಾಡಿಕೊಂಡೆವು. ಮೊದಲು "ಮೋನಾಲಿಸಾ" ಮೊದಲಾದ ಕಲಾವೈಭವಗಳ ಕುರಿತು ನಾವು ಚರ್ಚಿಸಿದೆವು- ಸಂಭಾಷಣೆಯಲ್ಲಿ ನನ್ನೊಡನೆ ಮಾತಾಡುತ್ತಿದ್ದ ವ್ಯಕ್ತಿ ಬಹಳ ಚತುರನಿದ್ದ. ಕೈಗೆ ಕೈ ಹಿಡಿದುಕೊಂಡು ನಾವು ಮುನ್ನಡೆದೆವು.

ಇವತ್ತು "*Body beautiful*" ಪ್ರದರ್ಶನಕ್ಕೆ ಬರುವುದಿಲ್ಲವೇ-ಕೇಳಿತಾ ವ್ಯಕ್ತಿ. "ಎಲ್ಲಿ?" ಎಂದು ಕೇಳಿದೆ. "ನನ್ನೊಡನೆ ಬನ್ನಿ" ಎಂದೊಡನೆಯೇ ಅಂದು ನನ್ನನ್ನು ಹೊಟೆಲಿಗೆ ಕರದೊಯ್ದು ಮಾಯವಾದವನ ಜಾತಿಗೆ ಇವನೂ ಸೇರಿರಬೇಕೆಂದು ಭಾವಿಸಿದೆ. ನಿಶಾಮಂದಿರಕ್ಕೆ ಹೋಗಬೇಕೆಂದು ಹಾದಿ ನೋಡುತ್ತಿದ್ದ ನನಗೆ ಈ ಆಹ್ವಾನವು ಸಂದರ್ಭೋಚಿತವಾಯಿತು.

ಮುಸ್ಸಂಜೆ. ಅಲಂಕರಿಸಲ್ಪಟ್ಟ ಒಂದು ಮನೆಯ ಸಮೀಪಕ್ಕೆ ನಾವು ಹೋದೆವು. ನನ್ನ ಹೊಸ ಮಿತ್ರನ ಸೂಚನೆಯಂತೆ ಇಬ್ಬರಿಗೂ ೨೦ ಫ್ರಾಂಕು ಕೊಟ್ಟು ಎರಡು ಟಿಕೇಟುಗಳನ್ನು ಕೊಂಡುಕೊಂಡೆ. ನಾನು ಸುತ್ತುಮುತ್ತಲೂ ನೋಡುತ್ತಾ ಅವನೊಡನೆ ಒಳಗೆ ಪ್ರವೇಶಿಸಿದೆ.

ಹುಟ್ಟಿದಂದಿನಿಂದ ಅಂತಹ ದೃಶ್ಯವನ್ನು ನಾನು ಕಂಡಿರಲಿಲ್ಲ. ಒಳಗೆ ಹೆಚ್ಚು ಮಂದಿಯಿರಲಿಲ್ಲ. ಅದೊಂದು ಉದ್ಯಾನವನದಂತೆ ಕಾಣುತ್ತಿತ್ತು. ಪೂರ್ಣಿಮೆಯ ಬೆಳ್ದಿಂಗಳು. ಅಲ್ಲಲ್ಲಿ ಚಿಕ್ಕ ಚಿಕ್ಕ ಹೂ ಲತೆ ಮರಗಳಿದ್ದವು. ಪ್ಯಾರಿಸಿನಲ್ಲಿಯೂ ಅಂತಹ ಉದ್ಯಾನವನವನ್ನು ಕಂಡು ನನಗೆ ಅಚ್ಚರಿಯೆನಿಸಿತು. ನಾವಿಬ್ಬರೂ ಬೀಳಲಿನ ಆಸನದಲ್ಲಿ ಕುಳಿತೆವು. ನನ್ನ ಇನ್ನೊಂದೆಡೆಯಲ್ಲಿ ತರುಣಿಯೊಬ್ಬಳು ಕುಳಿತಿದ್ದಳು. ಗುಂಗುರು ಗುಂಗುರಾದ ಕೂದಲು. ಎದೆಯಲ್ಲೊಂದಿಷ್ಟೂ ಬಟ್ಟೆಯಿಲ್ಲ. ಪರಿಮಳದ್ರವ್ಯವನ್ನು ಲೇಪಿಸಿಕೊಂಡಿದ್ದಳೆಂದು ಅಲ್ಲಿ ಕುಳಿತೊಡನೆಯೇ ನನಗರಿಯಿತು.

ನಾನಾಕೆಯನ್ನು ನೋಡುತ್ತಾ ಇದ್ದೆ. ಎಲ್ಲಿಂದಲೊ ಒಂದು ಗಂಟೆ ಬಾರಿಸಿದಂತಾಯಿತು. ನಾವಿಬ್ಬರೂ ನೋಡುತ್ತಾ ಹೋದೆವು. ಆಕೆಯ ಕಣ್ಣಾಲಿಗಳು ನಾನಾಕಡೆಗೆ ತಿರುಗುತ್ತಿದ್ದವು. ಆ ಗುಪ್ತ ಭಾಷೆಯ ಅರಿವು ನನಗಿಲ್ಲದಿದ್ದರೂ ಆಕೆಯ ಅಭಿಪ್ರಾಯವು ನನಗರಿಯಿತು. ನಾನು ಆಕೆಯೊಡನೆ ಮಾತಾಡಲು ಬಾಯೆತ್ತಿದಾಗ ನನ್ನೆಡಗಡೆಯಲ್ಲಿದ್ದ ಮಿತ್ರನು "*Look*" ಎಂದು ಹೇಳಿಯೇ ಬಿಟ್ಟ. ಹಸುರು ಬಣ್ಣದ ವಿದ್ಯುಚ್ಛಕ್ತಿಯ ದೀಪ. ಅಲ್ಲಿ ಕುಳಿತವರೆಲ್ಲರೂ ಹಸುರು ಹಸುರಾಗಿ ಕಾಣಿಸಿದರು.

"*Now begins the Exhibition*" ನನ್ನ ಮಿತ್ರ ಹೇಳಿದ. ಪ್ರದರ್ಶನವು ಪ್ರಾರಂಭವಾಗುತ್ತದೆಂದು ನನಗೂ ತಿಳಿದಿತ್ತು.

ಹಿಂದೆ ಸೊಗಸಾದ ಹೂವಿನ ಗಿಡಗಳು. ಅದರೆದುರಿನಲ್ಲಿ ಬಾಗಿರುವ ಸಸಿಯೊಂದರ ಕೊಂಬೆ. ವಿದ್ಯುದ್ದೀಪಗಳು ಅಲ್ಲಿ ಝುಗಝುಗಿಸಿದವು. ಕೂಡಲೆ ಕತ್ತಲು. ಯಾವುದೂ ಕಾಣಿಸುತ್ತಿದ್ದಿಲ್ಲ. ಅಂದು ಪೂರ್ಣಿಮೆಯಲ್ಲವೆಂದು ನನಗಾಗ ತಿಳಿಯಿತು. ಕೃತಕವಾದ ಉದ್ಯಾನವನ್ನು ಅಷ್ಟೊಂದು ಸುಂದರವಾಗಿ ಹೇಗೆ ಅಲಂಕರಿಸಿದರೆಂದು ನನಗೆ ಆಶ್ಚರ್ಯವಾಯಿತು. ಕತ್ತಲಾದುದೇತಡ, ನನ್ನ ಬಲಗಡೆಯಲ್ಲಿ ಕುಳಿತಿದ್ದ ವ್ಯಕ್ತಿಯ ಕೈಯೊಂದು ನನ್ನ ಬಳಿ ಸಾರಿತು. ಅರೆಕ್ಷಣದಲ್ಲಿಯೇ ಆಕೆಯ ಮಧುರ ತುಟಿಗಳ ಚುಂಬನ ನನಗೆ ಪರಮಾನಂದವನ್ನುಂಟುಮಾಡಿತು. ಇಷ್ಟಾಗುವಾಗ ಹಸುರು ದೀಪಗಳು ಝುಗಝುಗಿಸಿದುವು. ಪ್ರಾಯಶಃ ನನ್ನ ಬಳಿಯಲ್ಲಿದ್ದ ಮಿತ್ರನಿಗೆ ಅನಿರೀಕ್ಷಿತ ಚುಂಬನದ ವಿಚಾರವು ತಿಳಿದಿರಬೇಕು ಬೆಳಕಾದೊಡನೆಯೇ ನನ್ನ ಹೊಸಸ್ನೇಹಿತೆ ಒಂದು ಸಿಗರೇಟು ಕೊಟ್ಟಳು. ನನ್ನ ಮಿತ್ರನಿಗೂ ಕೊಟ್ಟಬಳಿಕ ನಾವು ಮುಂದಿನ ದೃಶ್ಯದ ಕುರಿತು ಚರ್ಚಿಸುತ್ತಿದ್ದೆವು.

ಕೂಡಲೆ ಆ ಹೂಗಿಡಗಳ ಮಧ್ಯದಲ್ಲಿ ಬಣ್ಣಬಣ್ಣದ ದೀಪಗಳು ಝುಗಝುಗಿಸಿದುವು. ಕೊಂಬೆಯ ಮೇಲೆ ಕೈಯಿಟ್ಟು ಓರ್ವ ಲಲನೆಯು ಗಂಭೀರವಾಗಿ ಆಕಾಶದೆಡೆಗೆ ನೋಡುತ್ತಿದ್ದಳು. ತೀರಾ ನಗ್ನೆ. '*This is miss Davis*' "ನನ್ನಮಿತ್ರ ಆಕೆಯ ಪರಿಚಯ ಮಾಡಿಕೊಟ್ಟ ಕೂಡಲೆ ಕೈಚಪ್ಪಾಳೆಯಾಯಿತು. ಎಲ್ಲರೊಡನೆ ನಾನೂ ಸೇರಿಕೊಂಡೆ. ನಗ್ನವಾಗಿದ್ದ ಆ ಕುವರಿ ಕೋಗಿಲೆಯಂತೆ ಹಾಡತೊಡಗಿದಳು,ಕೋ

ಮಲ ಕಂಠ! ಆ ಸುಂದರ ಕಂಠದಿಂದ ಆ ಸ್ವರವು ಕೇಳಿಸಿದ್ದರಲ್ಲಿ ಯಾವ ಆಶ್ಚರ್ಯವೂ ಇಲ್ಲ. ಆಕೆ ಹಾಡುತ್ತಿದ್ದಂತೆಯೇ "ಚೆಂಪೇನ್" ಪಾನೀಯವನ್ನು ಹಂಚತೊಡಗಿದರು, ಎಲ್ಲರೂ ಕುಡಿದಾಯ್ತು.

'*Now begins the second item*,, ನನ್ನ ಮಿತ್ರನ ಮುಂದಿನ ಕಾರ್ಯಕ್ರಮವನ್ನು ವಿವರಿಸತೊಡಗಿದ. (ನನಗೆ ಫ್ರೆಂಚ್ ತಿಳಿಯದಿದ್ದುದರಿಂದ ಕಾರ್ಯಕ್ರಮದ ಪಟ್ಟಿಯನ್ನು ಅವನೇ ವಿವರಿಸಬೇಕಾಯಿತು.) ಬತ್ತಲೆಯಾಗಿದ್ದ ಆ ಕುವರಿಯು ನಲಿಯುತ್ತಾ ನಮ್ಮೆಲ್ಲರ ಬಳಿ ಸಾರಿಹೋದಳು. ಎಲ್ಲರಲ್ಲಿಯೂ ಒಂದು ಹುರುಪು ತಲೆದೋರಿತ್ತೆಂದು ನನಗೆ ತಿಳಿಯಿತು. ಚಂಪೇನ್ ಕುಡಿದುದರ ಪರಿಣಾಮವಾಗಿ ಪ್ರತಿಯೊಬ್ಬರ ಉತ್ಸಾಹವು ಹೆಚ್ಚಿತು.

ಕೂಡಲೆ ಕತ್ತಲಾಯಿತು. ಐದು ನಿಮಿಷಗಳ ತನಕ ಪ್ರಚಂಡ ಕತ್ತಲೆ. ಮುಂದಿನ ಕಾರ್ಯಕ್ರಮವು ಇನ್ನೊಂದು ಬತ್ತಲೆ ಸ್ತ್ರೀಯ ಪ್ರದರ್ಶನವಾಗಿರಬಹುದೆಂದು ನಾನು ನಿರೀಕ್ಷಿಸಿದ್ದೆ. ಬೆಳಕಾಯಿತು. ನೋಡುವುದೇನು? ನಾನು ನಾಚಿಕೆಯಿಂದ ತಲೆತಗ್ಗಿಸಿದೆ. "ಛೋ" ಯೆಂದು ಪ್ರತಿಯೊಬ್ಬರೂ ನಗಾಡಿದರು. ಎಲ್ಲರೂ ಬತ್ತಲೆಯಾಗಿದ್ದರು. ನಾನು ಮಾತ್ರ ಬಟ್ಟೆಬರೆಗಳನ್ನು ಧರಿಸಿದ್ದೆ. ನನ್ನ ಸಮೀಪವಿದ್ದವಳೂ ಬತ್ತಲೆ. ಉಪಾಯವಿಲ್ಲದೆ ನಾನೂ ಅವರನ್ನು ಅನುಕರಿಸಿದೆ. ಪ್ರಚಂಡ ನೃತ್ಯವು ಪ್ರಾರಂಭವಾಯಿತು. ನಸುಕು ದೀಪಗಳು. ತೀರಾ ಬತ್ತಲೆಯಾಗಿದ್ದ ಸ್ತ್ರೀಪುರುಷರು ಒಂದಿನಿತು ಲಜ್ಜೆಯಿಲ್ಲದೆ ನಲಿಯಲಾರಂಭಿಸಿದರು. ನನ್ನ ಬಳಿಯಲ್ಲಿದ್ದವಳ ಆ ನಳಿತೋಳ್ಗಳು ನನ್ನನ್ನಾಲಿಂಗಿಸಿದ್ದವು. ನಾವಿಬ್ಬರೂ ಆನಂದದಿಂದ ಕುಣಿದೆವು. ಮಧ್ಯಮಧ್ಯದಲ್ಲಿ "ಚೆಂಪೇನ್" ನಮ್ಮ ಉತ್ಸಾಹವನ್ನು ಮತ್ತಷ್ಟು ಹೆಚ್ಚಿಸಿತು. ಕುಣಿಕುಣಿದು ನಮಗೆ ಆಯಾಸವಾಯಿತು. ಇತರರಂತೆ ಸಮೀಪದ ಸೋಫದ ಮೇಲೆ ಕುಳಿತೆವು. ನಮ್ಮಿಬ್ಬರ ಅಧರಗಳು ಒಂದಾಗಿದ್ದವು. ಎದೆಗಳ ಮಿಲನವಾಗಿತ್ತು. ಪುನಃ ಚೆಂಪೇನ್! ಕುಡಿಕುಡಿದು ಅಮಲೇರಿತು. ನನ್ನ ಸುತ್ತಮುತ್ತಲಿನ ದೃಶ್ಯವನ್ನು ಹೇಳಿ ಪೂರೈಸದು. ಕುಡಿದು ಮತ್ತರಾಗಿದ್ದ ಸ್ತ್ರೀಪುರುಷರು ತಮ್ಮ ಕಾಮಕ್ರೀಡೆಯಲ್ಲಿ ನಿರತರಾಗಿದ್ದರು ನಮ್ಮಿಬ್ಬರ ವರ್ತನೆಯು ಪ್ರಾಯಶಃ ಅತ್ಯಂತ ಅಸಹ್ಯವಾಗಿರಬೇಕು. ಅಮಲು ತಲೆಗೇರಿ ಮುಂದೇನಾಯಿತೆಂದು ನನಗರಿಯಲಿಲ್ಲ.

ಆ ನಿಶಾಮಂದಿರದ ಸೌಂದರ್ಯ ಪ್ರದರ್ಶನವೆಂದರೆ ಸುಧಾರಿತ ವ್ಯಭಿಚಾರ. ಪ್ಯಾರಿಸಿನ ಆ ಇರುಳು ನಿವಾಸಗಳಲ್ಲಿ ಸೌಂದರ್ಯದ ಹೆಸರಿನಲ್ಲಿ ನಡೆಯುತ್ತಿರುವ ಪಾಪಕರ್ಮಗಳಿಗೆ ಲೆಕ್ಕವಿಲ್ಲ. ಶರೀರಸುಖವನ್ನು ಅನುಭವಿಸಲಾಶಿಸುವ ಸ್ತ್ರೀಪುರುಷರು ಆ ನಿಶಾಮಂದಿರಗಳಿಗೆ ಹೋಗಿ ತಮ್ಮ ಇಚ್ಛೆಯನ್ನು ಪೂರೈಸಿಕೊಳ್ಳುವುದುಂಟು.

ನಾನು ಕಂಡಿರುವ ಪ್ಯಾರಿಸಿನ ಇತರ ನಿಶಾಮಂದಿರಗಳಲ್ಲಿ ನಡೆದ ಸ್ವಾರಸ್ಯಮಯ ವಿಚಾರಗಳನ್ನು ಮುಂದೆ ವಿವರಿಸುತ್ತೇನೆ.

—"*True Romances*"

---

# ತೆರೆಯ ಮರೆಯಲ್ಲಿ

**ಶ್ರೀ ಬಿ. ಎಲ್. ಎ, ಕುಮಟಾ**

ನಿಮಗೆ ಬೇಸರವಾಗದಿರುವುದಕ್ಕಾಗಿ ನೀವಿಷ್ಟು ಬೇಸರಮಾಡಿಕೊಂಡರೆ, ಬೇಸರವಾದರೆ ನಿಮ್ಮ ಅವಸ್ಥೆಯು ಹೇಗಾಗಬಹುದೆಂದು ಹೇಳಲಾಗುವುದಿಲ್ಲ. ನಿಮ್ಮ ಪತ್ರದಲ್ಲಿ ತುಂಬಾ ಮಸಿ ಚೆಲ್ಲಿ, ಅದನ್ನು ನೀವು ಟಪ್ಪಾಲು ಮುಖೇನ ಕಳುಹಿಸಿರುವಿರಲ್ಲಾ- ಇದಕ್ಕೇನೆನ್ನಬೇಕು? ಪ್ರಾಯಶಃ ಅಂಚೆ ಇಲಾಖೆಯೊಡನೆ ನಿಮಗೆ ತುಂಬಾ ಮಮತೆಯಿರಬಹುದು.

ಂ ಂ ಂ

**ನಂಜನಗೂಡಿನ – . . . ತಂಡದವರಿಗೆ**

ನಿಮ್ಮ ಇಡೀ ತಂಡವು "ಭಟ್ಟರ ಭೇಟಿ"ಯು ಕುರಿತು ಬರೆದಿರುವುದನ್ನು ನೋಡುವಾಗ ಆಶ್ಚರ್ಯವೆನಿಸುತ್ತದೆ. ಅದು ನಿಮ್ಮ ತಂಡದ ಠರಾವಾಗಿರಲಾರದಷ್ಟೆ!

ಂ ಂ ಂ

**ಶ್ರೀ. ಯನ್. ಯಸ್. ಕೆ. ಕುಮಟಾ.**

ನಿಮ್ಮ "ನಿರ್ಭಾಗ್ಯ ಕುಮಾರಿ"ಯು ನಿಜವಾಗಿಯೂ ಹತಭಾಗಿನಿ. ಕಾದಂಬರಿ, ನಾಟಕ, ಅಜ್ಜಿಕತೆ-ಇವೆಲ್ಲವುಗಳಿಂದ ತಯಾರಿಸಿದ ಬಹುದೊಡ್ಡ ಸೀರೆಯುಟ್ಟಿದ್ದಾಳಾಕೆ. ಆ ನಿರ್ಭಾಗ್ಯ- ನೀರಸ- ಕುಮಾರಿಯನ್ನು ನೀವು ಹಿಂದೆ ತರಿಸಿಕೊಳ್ಳಬಾರದೇಕೆ?

---

## ಬ್ರಿಟಿಷ್ ಸಾಮ್ರಾಜ್ಯವು ಛಿನ್ನಭಿನ್ನವಾಗುವುದೆ?

(೮ನೆ ಪುಟದಿಂದ)

ಬ್ರಿಟಿಷ್ ಸಮುದ್ರ ಮಾರ್ಗಗಳ ಸಮೀಪ ಜರ್ಮನರಿಗೆ ವಸಾಹತುಗಳನ್ನು ಕೊಡಲು ಬ್ರಿಟಿಷರು ಹೆದರುತ್ತಾರೆ. ಹೀಗಿರುವುದರಿಂದ ಪರಿಸ್ಥಿತಿಯು ಬಹಳ ಕಠಿನವಾಗಿದೆ.

### ಭಾರತದಲ್ಲಿ—

ಭಾರತದಲ್ಲಿಯೂ ಪರಿಸ್ಥಿತಿಯು ಬ್ರಿಟಿಷರ ದೃಷ್ಟಿಯಲ್ಲಿ ಆಶಾಜನಕವಾಗಿಲ್ಲ. ಈಗಾಗಲೆ ಏಳು ಪ್ರಾಂತಗಳಲ್ಲಿ ಕಾಂಗ್ರೆಸು ತನ್ನ ಪ್ರಭಾವವನ್ನು ನಡೆಸುತ್ತಿದೆ. ಭಾರತೀಯರೇ ಮಾಡಬಹುದಾದ ಕಾನೂನಿನ ಪ್ರಕಾರ ಹಿಂದುಸ್ಥಾನವು ಆಳಲ್ಪಡಬೇಕೆಂದೂ, ಪೂರ್ಣ ಸ್ವಾತಂತ್ರ್ಯಕ್ಕೆ ಕಾನ್‌ಸ್ಟಿಟ್ಯೂಯೆಂಟ ಎಸೆಂಬ್ಲಿಯು ಪ್ರಥಮ ಹೊಸ್ತಿಲಿನಂತಾಗಬೇಕೆಂದೂ ಭಾರತೀಯರ ಒಮ್ಮತದ ಅಭಿಪ್ರಾಯವಾಗಿದೆ. ಫೆಡರಲ್ ಯೋಜನೆಗನುಸಾರವಾಗಿ ಹೆಚ್ಚಿನ ಅಧಿಕಾರಗಳು ಬ್ರಿಟಿಷ್ ಸರಕಾರಕ್ಕೇ ಸಲ್ಲುವುದರಿಂದ ಅದನ್ನು ತೀವ್ರವಾಗಿ ವಿರೋಧಿಸುವ ಯತ್ನಗಳನ್ನು ಕಂಡು ಬ್ರಿಟಿಷರು ತಬ್ಬಿಬ್ಬಾಗಿದ್ದಾರೆ.

### ಐಯರ್ ಲೇಂಡಿನಲ್ಲಿ

ಐಯರ್ಲೇಂಡಿನಲ್ಲಿ ಕೂಡಾ ಬ್ರಿಟಿಷರು ನಿರಾಶರಾಗಬೇಕಾಗಿದೆ. ಅಧ್ಯಕ್ಷರಾದ ಐಮನ್ ಡಿವೆಲೆರರವರ ಮುಂದಾಳುತ್ವದಿಂದಾಗಿ ಸಮಗ್ರ ಐರ್‌ಲೇಂಡನ್ನು ಡಬ್ಲಿನ್ ಪಾರ್ಲಿಮೆಂಟೇ ಆಳಬೇಕೆಂಬ ಅಭಿಪ್ರಾಯವು ಅಲ್ಲಿಯ ಜನರಲ್ಲಿ ಬೇರೂರಿದೆ. ಅಲ್ಲಿಯ ಆರ್ಥಿಕ ಸಮಸ್ಯೆಯನ್ನು ಈಗಾಗಲೇ ಅವರು ಬಿಡಿಸತೊಡಗಿದ್ದಾರೆ. ಯಾವ ದೃಷ್ಟಿಯಲ್ಲಿ ನೋಡುವುದಿದ್ದರೂ ಬ್ರಿಟಿಷರು ಎಂದಿನಂತೆ ವಸಾಹತುಗಳ ಮೇಲೆ ಅಧಿಕಾರ ನಡೆಸುವುದು ಪ್ರಯಾಸವಾಗಿದೆ.

### ಮುಂದೇನು?

ಬ್ರಿಟಿಷಸರಕಾರವು ಈ ಅವ್ಯವಸ್ಥೆಯನ್ನು ಕಂಡು ದಿಙ್ಮೂಢಾವಸ್ಥೆಯಲ್ಲಿದೆ. ರಾಜಮನೆತನದ ಸದಸ್ಯರನ್ನು ಕೆನಡಾ, ಆಸ್ಟ್ರೇಲಿಯಾ ಮೊದಲಾದ ದೊಡ್ಡ ವಸಾಹತುಗಳ ಗವರ್ನರರನ್ನಾಗಿ ನೇಮಿಸುವ ಯೋಜನೆಯು ಈಗಾಗಲೆ ಕಾರ್ಯರೂಪಕ್ಕೆ ಬರಲಾರಂಭಿಸಿದೆ. ಡ್ಯೂಕ್‌ಆಫ್ ಕೆಂಟರವರು ಆಸ್ಟ್ರೇಲಿಯಕ್ಕೆ ಗವರ್ನರರಾಗಿ ಹೋಗಿದ್ದಾರೆ. ಸದ್ಯದಲ್ಲಿಯೇ ಅವರು ಕೆನಡಕ್ಕೆ ವರ್ಗಾಯಿಸಲ್ಪಟ್ಟು ಡ್ಯೂಕ್ ಆಪ್ ವಿಂಡ್ಸರರು ಅವರ ಸ್ಥಾನವನ್ನು ಪಡೆಯುವುದರಲ್ಲಿದ್ದಾರೆ. ಬ್ರಿಟಿಷ್ ಪ್ರಸಿದ್ಧ ಗ್ರಂಥಕರ್ತರಾದ ಮಿ.ಯಚ್. ಜಿ ವೆಲ್ಸ ಮತ್ತು ರಾಜಕವಿಗಳಾದ ಮಿ.ಜ್ಹೋನ್‌ಮೇಸ್‌ಫೀಲ್ಡರವರು ಸದ್ಯದಲ್ಲಿಯೇ ಪ್ರತ್ಯಕ್ಷ ಪ್ರಚಾರ ಕಾರ್ಯಮಾಡಲು ಆಸ್ಟ್ರೇಲಿಯಕ್ಕೆ ತೆರಳಿದ್ದಾರೆ. ಒಟ್ಟಿನ ಮೇಲನ್ನುವುದಿದ್ದರೆ ಪೆಲೆಸ್ಟೈನ್, ಚೀನಾ ಆಫ್ರಿಕಾ ಮತ್ತು ಇತರ ಕಡೆಗಳಲ್ಲಿ ಬ್ರಿಟಿಷ್ ಹಿತಸಂಬಂಧಗಳಿಗೆ ಢಕ್ಕೆಯಾಗಲಾರಂಭಿಸಿದೆ. ಈಗ ಚಳವಳವಾಗುತ್ತಿರುವ ರಾಷ್ಟ್ರಗಳಿಗೆ ಸ್ವಾತಂತ್ರ್ಯವನ್ನು ಕೊಡದಿದ್ದರೆ ಬ್ರಿಟಿಷ ಸಾಮ್ರಾಜ್ಯವು ಛಿನ್ನ ಭಿನ್ನವಾಗುವುದೆಂಬ ಭಯವು ಕಾರ್ಯರೂಪಕ್ಕೆ ಭಾಷಾಂತರಿಸಲ್ಪಡುವುದೆಂಬುದು ನಿಜವಾಗಿ ಪರಿಣಮಿಸಬಹುದು.

---

## ನವ ವರ್ಷದ ಶುಭಾಕಾಂಕ್ಷೆ

**ನವ ವರ್ಷದ ಈ ಶುಭ ದಿನದಲ್ಲಿ ಅಂತರಂಗದ ಸಾವಿರಾರು ವಾಚಕರಿಗೂ, ಜಾಹಿರಾತುದಾರರಿಗೂ, ಮತ್ತು ಇನ್ನಿತರ ಹಿತಚಿಂತಕರಿಗೂ ನಮ್ಮ ಹಾರ್ದಿಕ ಅಭಿವಂದನೆಗಳನ್ನು ಆನಂದದಿಂದ ಅರ್ಪಿಸುತ್ತೇವೆ.**

— ಸಂಪಾದಕ.


# ಅಂತರಂಗ

**ಆದಿತ್ಯವಾರ, ಜನವರಿ ೧, ೧೯೩೯.**


# ರಾಷ್ಟ್ರೀಯ ಕೈಗಾರಿಕೆಗಳು

ಭಾರತದ ಹನ್ನೊಂದು ರಾಷ್ಟ್ರಗಳ ಪೈಕಿ ಒಂಭತ್ತು ಪ್ರಾಂತ್ಯಗಳಲ್ಲಿ ಕಾಂಗ್ರೆಸ್ ತನ್ನ ಪ್ರಭಾವವನ್ನು ನಡೆಯಿಸಲು ಪ್ರಾರಂಭಿಸಿರುವ ಈ ಸುಸಂದರ್ಭದಲ್ಲಿ ರಾಷ್ಟ್ರೀಯ ಕೈಗಾರಿಕೆಗಳನ್ನು ಸ್ಥಾಪಿಸುವ ಯತ್ನವನ್ನು ಮಾಡುತ್ತಿರುವುದು ಬಹಳ ಸ್ತುತ್ಯವಾಗಿದೆ. ಫೆಡರೇಶನಿನಂತಹ ಬ್ರಿಟಿಷ್ ಯೋಜನೆಗಳು ಭಾರತೀಯರ ಮೇಲೆ ಹೊರಿಸಲ್ಪಡುವ ಹಂಚಿಕೆಗಳಾಗುವುದಿದ್ದರೂ ಕಾಂಗ್ರೆಸ್ ತನ್ನ ಶಕ್ತಿಯನ್ನು ಹೆಚ್ಚಿಸುತ್ತಾ ಮುನ್ನಡೆಯುವುದೆಂಬುದರಲ್ಲಿ ಎರಡಭಿಪ್ರಾಯವಿರಲಾರದು. ಆರ್ಥಿಕ ಸ್ವಾತಂತ್ರ್ಯವಿಲ್ಲದೆ ರಾಜಕೀಯ ಸ್ವಾತಂತ್ರ್ಯವು ನಿಷ್ಪ್ರಯೋಜಕವಾದುದರಿಂದ ಜನಾಂಗದ ಹಿತದೃಷ್ಟಿಯಿಂದ ನವೀನ ಕೈಗಾರಿಕೆಗಳನ್ನು ಸ್ಥಾಪಿಸಲು ಅವಶ್ಯವಿರುವ ಅಂಕೆ ಸಂಖ್ಯೆಗಳನ್ನು ಸಂಗ್ರಹಿಸಿ, ಯೋಗ್ಯ ಯೋಜನೆಯನ್ನು ಮಾಡಲು ರಾಷ್ಟ್ರೀಯ ಕೈಗಾರಿಕೆಗಳ ಸಂಸ್ಥಾಪನಾ ಸಂಸ್ಥೆಯವರು ತೊಡಗಿರುವುದು ರಾಷ್ಟ್ರದ ಅಭಿವೃದ್ಧಿಯ ದೃಷ್ಟಿಯಲ್ಲಿ ಬಹಳ ಪ್ರಾಮುಖ್ಯವಾಗಿದೆ.

ಹಿಂದೂದೇಶವು ಕೈಗಾರಿಕೆಯ ದೃಷ್ಟಿಯಲ್ಲಿ ಬಹಳ ಹಿಂದುಳಿದಿರುವುದರಿಂದ ಮತ್ತು ಹೆಚ್ಚಿನ ಕೈಗಾರಿಕೆಗಳನ್ನು ವಿದೇಶೀಯರು ತಮ್ಮ ಅಧೀನವಿರಿಸಿಕೊಂಡಿರುವುದರಿಂದ ಕೈಗಾರಿಕೆಗಳ ಸಂಸ್ಥಾಪನಾ ಮಂಡಲಿಯವರ ಕೆಲಸವು ಸುಲಭಸಾಧ್ಯವಾಗಿಲ್ಲ. ಆಧುನಿಕ ನಾಗರಿಕತೆಯ ಈ ಕಾಲದಲ್ಲಿ ದೊಡ್ಡ ಕೈಗಾರಿಕೆಗಳನ್ನು ಪ್ರಾರಂಭಿಸದಿದ್ದರೆ ಗತ್ಯಂತರವಿಲ್ಲ. ಆದರೆ ಗ್ರಾಮ ಕೈಗಾರಿಕೆಗಳಿಗೆ ಯಾವ ದೃಷ್ಟಿಯಲ್ಲಿಯೂ ಹಾನಿಯುಂಟಾಗದಂತೆ ದೊಡ್ಡ ಕೈಗಾರಿಕೆಗಳನ್ನು ಮಾಡುವುದು ಪ್ರಾಮುಖ್ಯವಾಗಿದೆ.

ದೊಡ್ಡ ಕೈಗಾರಿಕೆಯೆಂದೊಡನೆಯೇ ಭಂಡವಾಳಶಾಹಿ ಮತ್ತು ಅದರೊಡನಿರುವ ನೂರಾರು ಹಾನಿಕಾರಕ ವಿಚಾರಗಳು ನಮ್ಮ ಕಣ್ಣಮುಂದೆ ಬಂದು ನಿಲ್ಲುತ್ತವೆ. ಪ್ರಜಾಸತ್ತಾತ್ಮಕ ರಾಷ್ಟ್ರಗಳಲ್ಲಿ ಕೂಡಾ ಪ್ರಾಮುಖ್ಯ ಕೈಗಾರಿಕೆಗಳು ಕೇವಲ ಕೆಲವೇ ಮಂದಿಯ ಅಧೀನವಿದ್ದು ರಾಷ್ಟ್ರದ ಸಂಪತ್ತು ಸರಿಸಮಾನವಾಗಿ ಹಂಚಲ್ಪಡದಿರುವುದನ್ನು ನಾವು ಕಾಣುತ್ತೇವೆ. ಆದುಕಾರಣ ಈ ಪ್ರಾಮುಖ್ಯ ಕೈಗಾರಿಕೆಗಳನ್ನು ಸರಕಾರವು ತನ್ನ ಹತೋಟಿಯಲ್ಲಿಟ್ಟುಕೊಳ್ಳುವುದು ಅವಶ್ಯವಾಗಿದೆ. ಕಾಂಗ್ರೆಸು ಈಗಾಗಲೇ ನೇಮಿಸಿರುವ ಕೈಗಾರಿಕೆಗಳ ಸಮಿತಿಯು ಇವೆಲ್ಲವುಗಳನ್ನು ಪರಿಶೀಲಿಸಿ ಭಾರತದಲ್ಲಿ ಯಶಸ್ವಿಯಾಗಬಲ್ಲ ಕೈಗಾರಿಕೆಗಳನ್ನೇ ಮೊದಲು ಪ್ರಾರಂಭಿಸಿ, ನಮ್ಮ ದೇಶದ ಆರ್ಥಿಕ ಪರಿಸ್ಥಿತಿಯನ್ನು ಸುಧಾರಿಸುವಂತಾಗಲಿ.

---

# ಇಂಗ್ಲೆಂಡಿನ "ಮ್ಯೂನಿಕ್ ಬ್ರೇಂಡ್" ಕೊಡೆಗಳು!

## ಬ್ರಿಟಿಷರ ಧೋರಣೆಯ ಕುರಿತು ಚಿತ್ರಕಾರರ ವ್ಯಂಗ್ಯ ಟೀಕೆ.

ಸರ್ವಾಧಿಕಾರಿಗಳಿಗೆ ಲಾಭದಾಯಕವಾಗಿ ಪರಿಣಮಿಸಿದ ಮ್ಯೂನಿಕ್ ಒಪ್ಪಂದದ ಕುರಿತು ಐರೋಪ್ಯ ರಾಜಕೀಯ ವಾತಾವರಣವಲ್ಲಿ ಹಲವು ವಿಧದ ಅಭಿಪ್ರಾಯಗಳು ಪ್ರಚಾರದಲ್ಲಿವೆ. ಕೆಲವರು ಅವರ ಧೋರಣೆಯ ಆತ್ಮಹತ್ಯೆಗೆ ಸಮಾನವಾದುದೆಂದು ಹೇಳುವುದಿದ್ದರೆ ಇನ್ನು ಕೆಲವರು ಅವರನ್ನು ಪ್ರಶಂಸಿಸುತ್ತಾ-ಚೇಂಬರ್ಲೇನರು ಲಕ್ಷೋಪಲಕ್ಷ ಜನರನ್ನು ಭಯಾನಕ ಯುದ್ಧದಿಂದ ತಪ್ಪಿಸಿದರೆನ್ನುತ್ತಾರೆ.

ಬ್ರಿಟಿಷ್ ಪ್ರಧಾನರಾದ ಚೇಂಬರ್ಲೇನರು ಇತ್ತೀಚೆಗೆ ಕೊಟ್ಟಿರುವ ಒಂದು ಭಾಷಣದಲ್ಲಿ 'ಮನಶ್ಶಾಂತಿ'ಯೇ ಮಾನವ ಸಮಾಜಕ್ಕೆ ಅತ್ಯಾವಶ್ಯಕವಾದುದೆಂದು ಹೇಳಿದ್ದಾರೆ. 'ಜರ್ಮನಿಯು ಯುರೋಪಿನ ಪೂರ್ವ ಭಾಗವನ್ನೂ, ಜಪಾನು ಏಸ್ಯಾಖಂಡದ ಪೂರ್ವ ಭಾಗವನ್ನೂ ಕೈವಶ ಪಡಿಸುವುದು ಅವ್ಯಾಹತವಾಗಿದೆ' ಯೆಂದೂ ಅವರು ಹೇಳಿದ್ದಾರೆ. ಆದರೆ ಇವೆರಡು ರಾಷ್ಟ್ರಗಳಿಂದಾಗಿ ಇಂಗ್ಲೆಂಡಿನ 'ಮನಶ್ಶಾಂತಿ'ಗೆ ಭಂಗ ಬಂದಿದೆ. ಒಂದು ವೇಳೆ ಜಪಾನು ಪೂರ್ವಏಸ್ಯಾದಲ್ಲಿ ಗೆದ್ದರೂ ಅದು ಆರ್ಥಿಕ ಬೆಂಬಲಕ್ಕಾಗಿ ಇಂಗ್ಲೆಂಡಿಗೆ ಶರಣೆನ್ನಬೇಕಾಗುವುದೆಂದು ಭಾವಿಸಿ ಚೇಂಬರ್ಲೇನರು ತಮ್ಮಷ್ಟಕ್ಕೇ ಸಮಾಧಾನ ಮಾಡಿಕೊಂಡಿದ್ದಾರೆ. ಈ ಧೋರಣೆಯು ಬಹಳ ಅಪಾಯಕರವಾದುದೆಂದು ಇಂಗ್ಲೆಂಡಿನ ಹಲವು ರಾಜಕೀಯ ಮುತ್ಸದ್ದಿಗಳು ಈಗಾಗಲೇ ಅಭಿಪ್ರಾಯಪಟ್ಟಿದ್ದಾರೆ. ಚೇಂಬರ್ಲೇನರು ಸನ್ಯಾಸಿಯ ತತ್ತ್ವವನ್ನು ಸಾರುತ್ತಾ ವ್ಯಾಪಾರಿಯಂತೆ ವರ್ತಿಸುವುದು ಸರಿಬೀಳದೆಂದು ಅನೇಕರು ಎಚ್ಚರಿಕೆಯಿತ್ತಿದ್ದಾರೆ.

ಮ್ಯೂನಿಕ್ ಒಪ್ಪಂದಕ್ಕೆ ಪ್ರಧಾನಮಂತ್ರಿ ಚೇಂಬರ್ಲೇನರೂ, ವಿದೇಶಮಂತ್ರಿ ಹೆಲಿಫೇಕ್ಸರೂ 'ಛತ್ರ-ಧಾರಿ'ಗಳಾಗಿ ಹೋದುದರಿಂದ ಯುರೋಪಿನ ಪ್ರಸಿದ್ಧ ವ್ಯಂಗ್ಯ ಚಿತ್ರಕಾರರು ಇಂಗ್ಲೆಂಡಿನಲ್ಲಿ ಮ್ಯೂನಿಕ್ ಕೊಡೆಗಳಾಗುತ್ತಿವೆಯೆಂದು ವ್ಯಂಗ್ಯವಾಗಿ ಚಿತ್ರಿಸಿದ್ದಾರೆ. ಈ ಚಿತ್ರದಲ್ಲಿರುವ ನಾಲ್ಕು ಕೊಡೆಗಳ ಪೈಕಿ ಎಡಗಡೆಯಲ್ಲಿರುವವರು ಹೆಲಿಫೇಕ್ಸ್ ಬಲಗಡೆಯಲ್ಲಿ ಜೇಂಬರ್ಲೇನ್. ಪ್ರಾಯಶಃ ಇಂಗ್ಲೆಂಡಿನ ಮ್ಯೂನಿಕ್ ಬ್ರೇಂಡ್ ಕೊಡೆಗಳು ನಾಝಿಸಮ್ ಮತ್ತು ಫ್ಯಾಸಿಸಮ್

ಮ್ಯೂನಿಕ್ ಕೊಡೆಗಳು.



ಈ ಕೊಡೆಗಳು ಮ್ಯೂನಿಕ್ ನಗರದಲ್ಲಿ ಸರ್ವಾಧಿಕಾರಿಗಳಾದ ಹಿಟ್ಲರ್ ಮುಸೋಲಿನಿಯರ ಪ್ರಶಂಸೆಗಳಿಗೆ ಪಾತ್ರವಾಗಿವೆ!

ಗಳ ಬಿರುಗಾಳಿಯಲ್ಲಿ ಅಡಿಮೇಲಾಗಿ ಚೂರು ಚೂರಾಗಲೂಬಹುದು!

ಗೆಳೆಯರ ತಂಡದ ಸದಸ್ಯರಾಗಿ ಅಖಿಲ ಕರ್ನಾಟಕದ ಗೆಳೆಯರೊಡನೆ ಸಂಬಂಧ ಬೆಳೆಸಿರಿ.

# ಗೆಳೆಯರ ತಂಡ

ಗೆಳೆಯರ ತಂಡದ ಚಟುವಟಿಕೆಗಳಲ್ಲಿ ಭಾಗವಹಿಸಿ ನಿಮ್ಮ ಲೋಕ ಜ್ಞಾನವನ್ನು ಹೆಚ್ಚಿಸಿರಿ.

ವಾರ ೧೨

ಗೆಳೆಯರ ತಂಡಕ್ಕೆ ಬರೆಯುವಾಗ "ಗೆಳೆಯರ ತಂಡ", C/o ಅಂತರಂಗ, ಉಡುಪಿ, ಎಂದು ಬರೆಯಿರಿ.

ಒಲವಿನ ಗೆಳೆಯರೆ,

ಹಳೆ ವರುಷವು ಇಂದಿನಿಂದ 'ನಿನ್ನೆ'ಗಳ ಸಾಮ್ರಾಜ್ಯಕ್ಕೆ ಸೇರುತ್ತದೆ. ಹೊಸವರುಷವು, ಹೊಸತನ, ಹೊಸ ಐಕ್ಯ ಮತ್ತು ಹೊಸ ಬಾಂಧವ್ಯವನ್ನು ಉಂಟುಮಾಡಲಿಕ್ಕೆ ಬಂದಿದೆ.

ಅವ್ಯವಸ್ಥೆಗಳಿಂದ ತುಂಬಿದ ಸಮ್ಮಾ ಜಗತ್ತಿನಲ್ಲಿ ದಿನಹೋದಂತೆ ಗೊಂದಲಗಳು ಹೆಚ್ಚುತ್ತಾ ಬರುತ್ತಿವೆ. ರಾಷ್ಟ್ರರಾಷ್ಟ್ರಗಳು ತಮ್ಮ ಹಿತಸಂಬಂಧಗಳನ್ನು ರಕ್ಷಿಸಿಕೊಳ್ಳುವುದಕ್ಕಾಗಿ ಪರಸ್ಪರ ಹೊಡೆದಾಡಿಕೊಳ್ಳುತ್ತಿವೆ. ರ್‍ಜನೆಯ ಇಸವಿಯು ಹಲವಾರು ಯುದ್ಧಗಳನ್ನು ಕಾಣಲಿದೆಯೆಂದು ಇಂದಿನ ಪರಿಸ್ಥಿತಿಯು ಹೇಳುತ್ತಿದೆ. ನಮ್ಮ ಭಾರತವು ಕೂಡಾ ಆಳರಸರ ಫೆಡರಲ್ ಯೋಜನೆಯನ್ನು ಒಮ್ಮತದಿಂದ ವಿರೋಧಿಸಬಹುದೆಂದು ಹೇಳಬಹುದಾಗಿದೆ. ಇವೆಲ್ಲವುಗಳನ್ನು ನೋಡುವಾಗ ಪ್ರಾಗತಿಕ ಅಭಿಪ್ರಾಯವನ್ನಾಂತು, ನಾವೆಲ್ಲರೂ ಜಾತಿ ಮತಗಳ ಶುಷ್ಕ ವಿಚಾರಗಳಿಗೆ ನಮ್ಮ ಲಕ್ಷ್ಯವೀಯದೆ ನಮ್ಮೊಳಗೆ ಪರಸ್ಪರ ಐಕ್ಯವನ್ನು ಬೆಳೆಸಿಕೊಳ್ಳುವುದು ಅತ್ಯಾವಶ್ಯಕವೆಂದು ಸ್ಪಷ್ಟವಾಗುತ್ತದೆ. ನಮ್ಮ ತಂಡದ ಸದಸ್ಯರು ಕೂಡ ಪರಸ್ಪರ ಭ್ರಾತೃಭಾವನೆಯನ್ನು ಹೆಚ್ಚಿಸಿಕೊಂಡು ಮಾತೃಭೂಮಿಯ ಯೋಗ್ಯ ಮಕ್ಕಳೆನ್ನಿಸಿಕೊಳ್ಳುವರೆಂದು ನನಗೆ ಭರವಸೆಯಿದೆ.

ನಮಗೆಲ್ಲರಿಗೂ ಪ್ರಿಯವಾಗಿರುವ ಗೆಳೆಯರ ತಂಡದ ಪುರೋಭಿವೃದ್ಧಿಗಾಗಿ ಎಲ್ಲಾ ದೃಷ್ಟಿಗಳಿಂದಲೂ ಯಥಾರ್ಥವಾಗಿ ದುಡಿದಿರುವ ನಮ್ಮ ಮಮತೆಯ ಗೆಳೆಯರಿಗೆ ಈ ಸಂದರ್ಭದಲ್ಲಿ ನಾನು ಹಾರ್ದಿಕವಾಗಿ ಅಭಿವಂದಿಸುತ್ತೇನೆ. ನಮ್ಮ ಚಟುವಟಿಕೆಗಳನ್ನು ಉತ್ಸಾಹದಿಂದ ಪ್ರಾರಂಭಿಸುವ ಕಾಲವು ಸಮೀಪಿಸುತ್ತಿದೆ. ತಂಡಕ್ಕೆ ಈಗಾಗಲೇ ೩೮ ಮಂದಿ ಸದಸ್ಯರಾಗಿ ಸೇರಿಸಿದ್ದಾರೆ. ಪ್ರಾಯಶಃ ಮುಂದಿನ ವಾರದೊಳಗೆ ೫೦ ಸದಸ್ಯರಾಗಲೂ ಬಹುದೆಂದು ನನ್ನ ನಿರೀಕ್ಷೆಯಿದೆ.

ನಮ್ಮ ತಂಡವು ನಿಮ್ಮೆಲ್ಲರ ಸಹಕಾರದಿಂದ ಉಪಯುಕ್ತ ಚಟುವಟಿಕೆಗಳನ್ನು ಮಾಡಿ ಕರ್ನಾಟಕದ ಗೆಳೆಯರಲ್ಲಿ ಆದೊಂದು ತರದ ಮಧುರ ಬಾಂಧವ್ಯವನ್ನು ಬೆಳೆಸಿ ನಿಮಗೆಲ್ಲರಿಗೂ ಆನಂದವನ್ನಿತ್ತು ಚಿರಕಾಲ ಬದುಕಿ ಬಾಳುವಂತಾಗಲಿ. ತಂಡದ ಸದಸ್ಯರು ತಮ್ಮ ಚಟುವಟಿಕೆಗಳಲ್ಲಿ ಜಯಶೀಲರಾಗಿ ಆಯುರಾರೋಗ್ಯಸಂಪನ್ನರಾಗಲಿ.

ಇತಿ ತಮ್ಮೊಲವಿನ

'ಗೆಳೆಯ'

## ತಂಡದ ಹೊಸ ಸದಸ್ಯರು

೩೪. ಶ್ರೀ. ಯಚ್. ಟಿ. ರಾಮಸ್ವಾಮಿ ಐಯಂಗಾರ, ೨೬, ಗೋಪಾಲಕೃಷ್ಣ ಸ್ವಾಮಿ ಟೆಂಪಲ್ ಸ್ಟ್ರೀಟ್, ಚಿಕ್ಕಪೇಟೆ, ಬೆಂಗಳೂರು.

ನಿಮ್ಮ ಸದಸ್ಯತನದ ನಂಬರು ೩೪

೦ ೦ ೦

೩೫. ಶ್ರೀ. ಬಿ. ಆರ್. ಯಸ್. ಆಚಾರ್ಯ, ಸಂಗೀತಾಧ್ಯಾಪಕ, ಮಹಿಳಾ ಸಮಾಜ, ಚಿಕ್ಕಮಗಳೂರು

ನಿಮ್ಮ ಸದಸ್ಯತನದ ನಂಬರು ೩೫

೦ ೦ ೦

೩೬. ಶ್ರೀ. ಜಿ. ಜನಾರ್ದನ ಸೋಮಯಾಜಿ, ರೈತ, ವೆಂಕಟೇಶ್ವರ ಭವನ್ ರೆಸ್ಟೋರೆಂಟ್, ಮಂಡ್ಯ.

ನಿಮ್ಮ ಸದಸ್ಯತನದ ನಂಬರು ೩೬

೦ ೦ ೦

೩೭ ಕೆ. ವೆಂಕಟಸೆಟ್ಟಿ, ವ್ಯಾಪಾರಿ, ಮಂಡ್ಯ.

ನಿಮ್ಮ ಸದಸ್ಯತನದ ನಂಬರು ೩೭

೦ ೦ ೦

೩೮ ಶ್ರೀ. ಕೆ. ಯನ್. ಕುಪ್ಪಯ್ಯ ಯಾನೆ ನಾಗಪ್ಪನಕ್ಷತ್ರಿ, ಭೂಮ್ಯಾಲಿಕ ಮಂಡ್ಯ.

ನಿಮ್ಮ ಸದಸ್ಯತನದ ನಂಬರು ೩೮

೦ ೦ ೦

# ಪುಣ್ಯಕ್ಷೇತ್ರವಾದ ಉಡುಪಿಗೆ ಬರುವ ಸಾವಿರಾರು ಯಾತ್ರಿಕರಲ್ಲಿ

**ಪ್ರಿಯ ಯಾತ್ರಿಕರೆ,**

ಭಾರತದ ಪ್ರಸಿದ್ಧ ಪುಣ್ಯಕ್ಷೇತ್ರಗಳಲ್ಲೊಂದಾದ ಉಡುಪಿಗೆ ಬಂದು ಶ್ರೀಕೃಷ್ಣ ಪರಮಾತ್ಮನ ಪವಿತ್ರ ದರ್ಶನವನ್ನು ಪಡೆದು ಸೇವೆ ಕಾಣಿಕೆಗಳನ್ನು ಸಲ್ಲಿಸಿದಷ್ಟಕ್ಕೆ ನಿಮ್ಮ ಯಾತ್ರೆಯು ಸಂಪೂರ್ಣವಾಯಿತೆಂದು ಭಾವಿಸಬೇಡಿರಿ. ನಿಮ್ಮ ಯಾತ್ರೆಯ ಸಂಪೂರ್ಣ ಫಲ ದೊರಕಬೇಕಾದರೆ ಶ್ರೀ ರಾಮಕೃಷ್ಣ ಥಿಯೇಟರಿನಲ್ಲಿ ನಿಮಗಾಗಿ ಎದುರು ನೋಡುತ್ತಿರುವ ಭಕ್ತ ಶಿರೋಮಣಿ "ಸಂತ ತುಕಾರಾಮ"ನ ಶ್ರದ್ಧಾಮಯವಾದ ಗೀತೆಗಳ ಸವಿಯನ್ನು, ಶ್ರೀಕೃಷ್ಣ ಪರಮಾತ್ಮನ ಅಗಾಧ ಚರಿತ್ರೆಯನ್ನೂ ಕಣ್ಮುಂದಿರಿಸುವ ಶ್ರೀ "ಕೃಷ್ಣಲೀಲಾ"ಚಿತ್ರವನ್ನೂ ಕಾಣಲೇಬೇಕು. ಈ ಎರಡ ಚಿತ್ರಗಳನ್ನು ನರೇಂದ್ರರಿಂದವೊದಲ್ಗೊಂಡು ಸಾಮಾನ್ಯರ ತನಕ ಪ್ರತಿಯೊಬ್ಬರೂ ಕಂಡು ಆನಂದದಿಂದ ಹಿರಿಹಿಗ್ಗಿದ್ದಾರೆ; ಹಾಡಿ ಹೊಗಳಿದ್ದಾರೆ. ಸಂತ ತುಕಾರಾಮನ ಸುಶ್ರಾವ್ಯ ಭಕ್ತಿಗೀತೆಗಳು ಸಾವಿರಾರು ಹೃದಯಗಳಲ್ಲಿ ಮನೆಮಾಡಿಕೊಂಡಿವೆ ಜಗತ್ತನ್ನು ಪಾವನಗೊಳಿಸಿದ ಪುಣ್ಯಪುರುಷರ ಪಾವನ ಜೀವನವನ್ನು ನೀವು ಕಾಣದಿದ್ದರೆ ನಿಮ್ಮ ಜೀವನದ ಸ್ವರ್ಣಸಂದರ್ಭವನ್ನು ಕಳೆದುಕೊಂಡಂತಾಗುತ್ತದೆ. ಥಿಯೇಟರಿನಲ್ಲಿರುವ ಭಗವಾನ್ ಬುದ್ಧದೇವನ ನಯನ ಮನೋಹರ ಮೂರ್ತಿಯನ್ನೂ ಕಾಣಲು ಮರೆಯಬೇಡಿರಿ.



ಶ್ರೀ ರಾಮಕೃಷ್ಣ ಥಿಯೇಟರಿನಲ್ಲಿರುವ ಭಗವಾನ್ ಬುದ್ಧದೇವನ ಪ್ರತಿಮೆ.

ನಿಮ್ಮೆಲ್ಲರ ಬರವನ್ನು ನಿರೀಕ್ಷಿಸುವ-

## ಶ್ರೀ ರಾಮಕೃಷ್ಣ ಥಿಯೇಟರ್, ಉಡುಪಿ.



'ಲೋಕದಲ್ಲಿ ಅನ್ಯಾಯ ಹೆಚ್ಚುತ್ತಾ ಬಂತು' ಎನ್ನುವವರಿಗೆ ಬುದ್ಧಿಯಿಲ್ಲ. ಹಾಗೆ ಹೆಚ್ಚುತ್ತಾ ಬರುತ್ತಿದ್ದರೆ ಇಷ್ಟರಲ್ಲೇ ಕಲ್ಕ್ಯವತಾರವಾಗದೆ ಹೋಗುತ್ತಿತ್ತೆ?

೦೦೦ ೦೦೦ ೦೦೦

ಲೋಕಕ್ಕೆ ಪೀಡೆಯೊದಗಿದಾಗಲೆಲ್ಲಾ 'ಸಂಭವಾಮಿ ಯುಗೇ ಯುಗೇ' ಎಂದು ಭಗವಂತನೇ ಗೀತೆಯಲ್ಲಿ ಹೇಳಿರುವನಲ್ಲ. ದೇವರು ಕೊಟ್ಟ ಮಾತಿಗೆ ತಪ್ಪಿ ನಡೆಯಲಾರನಷ್ಟೆ!

೦೦೦ ೦೦೦ ೦೦೦

ಒಂದು ಪ್ರಮಾದವೇನೋ ಆಗಿದೆ. ಕಲಿಯುಗದಲ್ಲಿ ಕಲ್ಕ್ಯವತಾರ,ಎಂದು ಭಗವಂತನು ದೀರ್ಘಾಲೋಚನೆ ಮಾಡದೆ ಮೊದಲೇ ಜಾಹೀರುಮಾಡಿ ಬಿಟ್ಟಿದ್ದನಲ್ಲ-ಅದು ತಪ್ಪು!

೦೦೦ ೦೦೦ ೦೦೦

ಕಲಿಯುಗದಲ್ಲಿ ತಾನು ಕುದುರೆಯೇರಿ ಹೋಗುವಾಗ ಮನುಷ್ಯರು ವಿಮಾನವೇರಿ ಬರುತ್ತಾರೆಂದು ಭಗವಂತನು ಆದಿನ ಊಹಿಸಿರಲಿಕ್ಕಿಲ್ಲ!

೦೦೦ ೦೦೦ ೦೦೦

ಅಥವಾ ಭಾಷೆ ಸಲ್ಲಿಸುವದಕ್ಕಾಗಿ ಇಷ್ಟರಲ್ಲಿ ಚೀನದಲ್ಲೋ, ಸ್ಪೆಯಿನಿನಲ್ಲೋ ಕುದುರೆಯೇರಿ ಹೋಗಿ ಬಾಂಬಿನ ಗಂಡಾಂತರಕ್ಕೊಳಗಾದನೋ ಎಂಬ ಸಂಶಯ!

೦೦೦ ೦೦೦ ೦೦೦

ನಮ್ಮ ಚೇಂಬರ್ಲೆನರೇ ಕಲ್ಕ್ಯವತಾರವಾಗಿರಬಹುದೋ ಎಂಬುದು ಇನ್ನೊಂದು ಅನುಮಾನ.

೦೦೦ ೦೦೦ ೦೦೦

ಅರ್ಧಹಯ, ಅರೆಮನುಷ್ಯನಾಗಿ ಕಲ್ಕ್ಯವತಾರ ಧರಿಸುತ್ತೇನೆಂದು ಭಗವಂತನೂ ಹೇಳಿದ್ದ; ಚೇಂಬರ್ಲೆನರು ಕೂಡ ಪೂರ್ತಿ ಮನುಷ್ಯರಾಗಿಲ್ಲ!

೦೦೦ ೦೦೦ ೦೦೦

ಎರಡನೆಯದಾಗಿ ಲೋಕದಲ್ಲಿ ಶಾಂತಿ ಸ್ಥಾಪಿಸಿದ ಅವತಾರ ಪುರುಷರೆಂದು ಕರೆಯುವದು ಚೇಂಬರ್ಲೆನರನ್ನೆ; ಬಾಕಿಯಿದ್ದ ಅವತಾರವೆಂದರೆ ಕಲ್ಕಿಯೊಂದೇ! ಸರಿ, ಚೇಂಬರ್ಲೆನರೇ ಆ ಕಲ್ಕ್ಯವತಾರ!

೦೦೦ ೦೦೦ ೦೦೦

ಭಗವಂತನಿಗೂ ಬುದ್ಧಿಯಿದೆ. ಪುರಾಣವಾದಿಗಳು ಹೇಳುವ ರೀತಿಯಲ್ಲಿ ಕಲ್ಕ್ಯವತಾರ ತಾಳುತ್ತಿದ್ದರೆ ಲೋಕಕ್ಕೂ ರಕ್ಷಣೆಯಿಲ್ಲ; ಅವನಿಗೂ ಉಳಿಗಾಲವಿಲ್ಲ! ಈಗ ಲೋಕವಿಡೀ ಕ್ಷೇಮಃ!

---

ಈಗಿನ ಕಾಲದ ಒಂದು ಸುಧಾರಣೆಯೆಂದರೆ 'ಹರಿಜನರನ್ನು ಮುಟ್ಟಬಹುದು; ಅರಿಜನರನ್ನು ಮುಟ್ಟಬಾರದು' ಎಂಬುದು.

೦೦೦ ೦೦೦ ೦೦೦

ಹರಿಜನರನ್ನು ಮುಟ್ಟುವ ಸುಧಾರಣೆ ಭಾರತದಲ್ಲಿ; ಅರಿಜನರನ್ನು ಮುಟ್ಟದಿರುವ ಸುಧಾರಣೆ ಯುರೋಪಿನಲ್ಲಿ.

೦೦೦ ೦೦೦ ೦೦೦

ಸ್ಪೈನಿನಲ್ಲಿ ದಂಗೆಗಾರರು, ಚೀನದಲ್ಲಿ ಜಪಾನರು ಶಾಂತಿಯ ವಿರೋಧಿಗಳೆಂದು ಎಲ್ಲರೂ ಒಪ್ಪುತ್ತಾರೆ. ಆದ್ದರಿಂದಲೇ 'ಅರಿಜನರನ್ನು ಮುಟ್ಟಬೇಡ' ಅಥವಾ 'ದುರ್ಜನರಿಗೆ ದೂರವಾಗಿರು' ಎಂಬ ನೀತಿಯಂತೆ, ಜರ್ಮನಿ ಇಟಲಿ ಹೊರತು ಎಲ್ಲರೂ ದೂರವಾಗಿದ್ದಾರೆ; ತಾಟಸ್ಥ್ಯ ಧೋರಣೆ ವಹಿಸಿದ್ದಾರೆ.

೦೦೦ ೦೦೦ ೦೦೦

ಇದು ಶಾಂತಿ ಸಾಧನೆಯಲ್ಲವೆನ್ನುವವರಾರು? ಯೋಗಸಾಧನೆ ಮಾಡುವವನು ಅನ್ಯರ ಕಂಠವನ್ನು ಬಿಗಿ ಹಿಡಿಯುವದಿಲ್ಲ; ತಾನು ದೂರ ಹೋಗಿ ತನ್ನ ಶ್ವಾಸ ಬಂಧಿಸಿ ಕುಳಿತುಕೊಳ್ಳುತ್ತಾನೆ. ಬ್ರಿಟಿಷ್, ಫ್ರಾನ್ಸುಗಳು ಇಂತಹ ಶಾಂತಿ ಸಾಧನೆಯಲ್ಲಿವೆ!

---

ಮತ್ತೆಲ್ಲಿ ಅನ್ಯಾಯ ನಡೆಯುತ್ತಿದೆ? ಲೋಕದ ಎಲ್ಲಾ ಕಡೆಗಳಲ್ಲಿಯೂ ನ್ಯಾಯವೇ ಬಾಳುತ್ತಿದೆ; ಅಹಿಂಸೆ ಆಚರಣೆಯಲ್ಲಿದೆ.

೦೦೦ ೦೦೦ ೦೦೦

ಸೋವಿಯೆಟ್ ಸಮುದ್ರದಲ್ಲಿ ಮೀನು ಹಿಡಿಯುವ ಕುರಿತು ರಷ್ಯಕ್ಕೂ ಜಪಾನಿಗೂ ಜಗಳವೆದ್ದಿದೆಯಲ್ಲ- ಅದಂತೂ ತೀರಾ ಅಹಿಂಸಾತ್ಮಕವಾದುದು.

೦೦೦ ೦೦೦ ೦೦೦

ಮನುಷ್ಯರನ್ನು ಕೊಲ್ಲಬಾರದೆಂಬುದರಲ್ಲಿ ಅಂತಹ ದೊಡ್ಡ ಅಹಿಂಸಾ ತತ್ತ್ವವೇನೂ ಇಲ್ಲ. ಮೀನುಗಳನ್ನು ಕೊಲ್ಲಬಾರದು- ಎನ್ನುವದುಂಟಲ್ಲ, ಇದೀಗ ನಿಜವಾದ ಅಹಿಂಸೆ; ಲೋಕಕ್ಷೇಮದ ಪೂರ್ವ ಸೂಚನೆ!

೦೦೦ ೦೦೦ ೦೦೦

ಅಂತು ಭಗವಂತನ ಕಲ್ಕ್ಯವತಾರದಿಂದಾಗಿಯೇ ಈ ರೀತಿ ಲೋಕಶಾಂತಿಯಾಗುತ್ತಿದೆ; ಅಥವಾ ಲೋಕದಲ್ಲಿ ಹೀಗೆ ಶಾಂತಿಯಿದ್ದುದರಿಂದಲೇ ಭಗವಂತನು ಈ ವರೆಗೂ ಅವತರಿಸಿಲ್ಲ.

೦೦೦ ೦೦೦ ೦೦೦

ಅದಕ್ಕಾಗಿಯೇ 'ಲೋಕದಲ್ಲಿ ಅನ್ಯಾಯ ಅಧಿಕವಾಗುತ್ತಾ ಬಂತು ಎನ್ನುವವರಿಗೆ ಬುದ್ಧಿಯಿಲ್ಲಾ'ಅಂದೆ.

—ದೂಮ

# ನಿಮಗೆ **ಕನ್ನಡ** ಬರುತ್ತದೆಯೇ?

**ಹಾಗಿದ್ದರೆ ಬಂದಿದೆ ಹೊಸ ವರ್ಷ! ಓದಿ ಪಡೆಯಿರಿ ನವ ಹರ್ಷ;**

ಏನನ್ನು?

**ಮೈಸೂರು ದಿವಾನರ ಸಂದೇಶದೊಡನೆ, ಬಣ್ಣ ಬಣ್ಣದ ವಿವಿಧ ಚಿತ್ರಗಳೊಡನೆ, ಪ್ರಸಿದ್ಧರ ಲೇಖನ, ಕವನ, ಕತೆಗಳೊಡನೆ,. . . . ಮುದ್ದಾದ ಮುದ್ರಣದೊಡನೆ**

## ತಾ. **12-1-1939**ಕ್ಕೆ ಪ್ರಕಟವಾಗುವ

# ನವಯುಗದ ಮಕರ ಸಂಕ್ರಾಂತಿ ವಿಶೇಷ ಸಂಚಿಕೆಯನ್ನೆ

# ಈ

**ಕನ್ನಡಿಗ ಬಾಕ್ಸಾಂಗ!** **ಬುಜ್ಜಿಬ ಅಂತರಂಗ**

**ವಿಶೇಷ ಸಂಚಿಕೆಯಲ್ಲಿ**

**ಪ್ರೊ. ಆರ್. ವಿ. ಜಹಗಿರದಾರ, ಎಂ. ಎ.**(London)
**ಡಾ. ನಾ. ಸು. ಹರ್ಡೀಕರ್, ಶ್ರೀ ಶಿವರಾಮ ಕಾರಂತ್,**
**ಶ್ರೀ. ಮುದವೀಡು ಕೃಷ್ಣರಾಯ, ಶ್ರೀ ಹನುಮಂತ ರಾವ್,**
**ಮಾಂಜರೇಕರ, ಎಂ. ಎ. ಶ್ರೀ. ಸ. ಪ. ಗಾಂವಕರ, ಬಿ. ಎ.**
**ಶ್ರೀ. ಡಿ. ಆ. ಚೆನ್ನೇಗೌಡರು, ಬಿ. ಎ. ಶ್ರೀಮತಿ ಆರ್. ಕಲ್ಯಾಣಮ್ಮ**
**ಶ್ರೀಮತಿ ಸರಸ್ವತಿ ಬಾಯಿ ರಾಜವಾಡೆ**

## ಮೊದಲಾದವರ ವಿಚಾರವನ್ನು ಹೊಡೆದೆಬ್ಬಿಸುವ ಲೇಖನಗಳು.

ಶ್ರೀ. ಕೊರಡ್ಕಲ್ ಶ್ರೀನಿವಾಸ ರಾವ್,
ಶ್ರೀ. ಪಡುಕೋಣೆ ವಸಂತಿ ಬಾಯಿ,
ಶ್ರೀ. ಎಸ್. ವೆಂಕಟರಾಜ,

**ಮೊದಲಾದವರ ರಸಭರಿತ ಕತೆಗಳು.**

ಶ್ರೀ. ಪಾದೂರು ವಾಸುದೇವ ಉಪಾಧ್ಯಾಯ, ಬಿ. ಎ. ಎಲ್. ಎಲ್. ಬಿ.
ಶ್ರೀ. ಎನ್. ಕೆ. ಕುಲಕರ್ಣಿ, ಎಂ. ಎ.
ಶ್ರೀ. ಬಿ. ಶ್ಯಾಮರಾಯ ಶೆಟ್ಟಿ, ಬಿ. ಎ. ಎಲ್. ಟಿ.

**ಮೊದಲಾದವರ ನಗೆಬರಹಗಳು. ಇತ್ಯಾದಿ ಇತ್ಯಾದಿ ಬರಲಿವೆ.**

## ನೀವು ಆತುರದಿಂದ ಓದುವ ಕತೆಗಳೇ ಐದಾರು ಬರುವವು.

**ಈ ಸಂಚಿಕೆಯು ಕರ್ನಾಟಕಕ್ಕೊಂದು ಭೂಷಣ.**

**ಇದನ್ನು ಕೊಳ್ಳುವುದು ಕನ್ನಡಿಗರಿಗೊಂದು ಗೌರವ.**

ನಿಮ್ಮ ಪ್ರತಿಗಳನ್ನು ಸ್ಥಳೀಯ ಏಜಂಟರಲ್ಲಿ ತರಿಸಿಕೊಳ್ಳಿರಿ. ಇಲ್ಲವೆ ಇಂದೇ ನಾಲ್ಕಾಣೆ ಸ್ಟಾಂಪನ್ನು ಕಳುಹಿಸಿಕೊಡಿರಿ. ನಿಮ್ಮ ಮನೆಬಾಗಿಲಿಗೆ ಬಂದೇ ಬಿಡುತ್ತೆ ಈ ವಿಶೇಷ ಸಂಚಿಕೆ.

**ವಿಶೇಷ ಮಾಹಿತಿಗೆ ಬರೆಯಿರಿ.** **ಮೆನೇಜರ್, ನವಯುಗ, ಉಡುಪಿ.**



ನಿಮ್ಮನ್ನು ಹೆದರಿಸುವ ಆ ಜೈಲು!

# ಜೈಲಿನೊಳಗೂ ಬಂಧಿಸಿಡಲಾಗದ ಹಟ ಮತ್ತು ಚಟ!

ಢಕಾಯಿತಿನ ತಕ್ಸೀರಿಗೊಳಗಾಗಿ ಏಳು ವರ್ಷ ಕಠಿನ ಶಿಕ್ಷೆ ಪಡೆದು ಮದ್ರಾಸ್ ಪ್ರಾಂತ್ಯದ ಬೇರೆ ಬೇರೆ ಜೈಲುಗಳಲ್ಲಿದ್ದು ಬಂದವರೊಬ್ಬರ ಆತ್ಮಕಥೆಯಿದು.

ಜೈಲು ಜೀವನದ ಕುರಿತು ಒಂದು ಮಹಾ ಭಾರತವನ್ನೇ ಬರೆಯಬಹುದು. ಹೆಚ್ಚೇನು? ಅಲ್ಲಿಯ ಪ್ರತಿಯೊಂದು ಕ್ಷಣವೂ ಒಂದೊಂದು ಚರಿತ್ರೆಯನ್ನು ನಿರ್ಮಿಸುತ್ತಲೇ ಇದೆ; ವರ್ಣಿಸಿದಷ್ಟೂ ವರ್ಣಿಸಬಹುದಾದ ಹೊಸತನವು ಪ್ರತಿಯೊಂದರಲ್ಲೂ ಇದೆ. ಆದರೆ ನಿಮ್ಮನ್ನು ದೀರ್ಘಕಾಲ ಜೈಲಿನಲ್ಲಿಡಲು ನನಗಿಷ್ಟವಿಲ್ಲ. ಆದ್ದರಿಂದ ಸದಾ ವಿಶೇಷವಿರುವ ಜೈಲಿನೊಳಗಿನ ಮಹಾ ವಿಶೇಷಗಳನ್ನು ಮಾತ್ರ ಆದಷ್ಟು ಚುಟುಕಾಗಿ ಹೇಳಿ, ಬೇಗನೇ ನಿಮ್ಮನ್ನು ಬಿಡುಗಡೆ ಮಾಡಬೇಕೆಂದು ಸಂಕಲ್ಪಿಸಿದ್ದೇನೆ.

ಸರಿ. ನಾವೀಗ ವೆಲ್ಲೂರು ಜೈಲಿನಲ್ಲಿದ್ದೇವಷ್ಟೆ. ಅಲ್ಲಿ ನಾನು ದಿನಕ್ಕೆಪ್ಪತ್ತೈದು ತೆಂಗಿನ ಕಾಯಿಗಳ ಸಿಪ್ಪೆಯನ್ನು ಗುದ್ದಿ, ಜಜ್ಜಿ ಬಿಡುವ ಮಹಾ ಭಟನಾಗಿದ್ದೆ. ನನ್ನ ಅಂದಾಜು ಪ್ರಕಾರ ನಮ್ಮನ್ನು ಮೇಯಿಸುವ ವಾರ್ಡರನಿಗೆ ನನಗಿಂತ ಕಡಿಮೆ ಕೆಲಸವಿಲ್ಲ. ಅವನ ಗುದ್ದುಗಳನ್ನು ಗುಣಿಸಿದರೆ ದಿನಕ್ಕೆಪ್ಪತ್ತೈದಕ್ಕಿಂತ ಕಡಿಮೆಯಾಗುವಂತಿಲ್ಲ. ಆದರೆ ಅವನು ಗುದ್ದಿದು

## ಲೇಖಾಂಕ ೧೦

ದೆಷ್ಟು ಎಂದು ಲೆಕ್ಕಮಾಡಿ ಕುಳಿತುಕೊಳ್ಳುವ ಕೆಲಸ ನನ್ನದಲ್ಲ. ವಾರ್ಡರನ ದೇಹದಲ್ಲಿ ಹುರುಪಿದ್ದರೆ ಎಪ್ಪತ್ತೈದರ ಬದಲಿಗೆ ನೂರೆಪ್ಪತ್ತೈದು ಗುದ್ದಿದರೂ ಗುದ್ದಬಹುದು; ಕೆಲವು ಗುದ್ದುಗಳನ್ನು ಮನೆಯಲ್ಲಿ ಹೆಂಡತಿಗೆ ಕೊಟ್ಟು ಬಂದಿದ್ದನಾದರೆ ಇಲ್ಲಿ ಇಪ್ಪತ್ತೈದು ಕೊಟ್ಟು ಮುಗಿಸಿದರೂ ಮುಗಿಸಬಹುದು! ಅಂತು ಅದಕ್ಕೊಂದು ನಿಯಮವಿಲ್ಲ. ನಮ್ಮ ಮಟ್ಟಿಗೆ ಹಾಗಲ್ಲ- ನಾವು ಗುದ್ದುವ ಸಿಪ್ಪೆ ಭರ್ತಿ ಎಪ್ಪತ್ತೈದು ಆಗಲೇ ಬೇಕು. ಆದ್ದರಿಂದ ನಾನು, ನನ್ನ ಗುದ್ದುಗಳನ್ನು ಲೆಕ್ಕವಿಡಬೇಕು ಹೊರತು ವಾರ್ಡರನ ಗುದ್ದುಗಳನ್ನಲ್ಲ. ನನ್ನ ಗುದ್ದಿನ ಲೆಕ್ಕ ಕಡಿಮೆ ಬಿದ್ದೊಡನೆ ವಾರ್ಡರನ ಗುದ್ದು ನಂಬ್ರ ಖಂಡಿತವಾಗಿಯೂ ಏರುವುದು! ಹೀಗೆ ಕೆಲವು ದಿವಸಗಳು ಕಳೆದ ನಂತರ ಗುದ್ದಿನ (ತಿನ್ನುವ ಮತ್ತು ಗುದ್ದುವ) ಅಭ್ಯಾಸವೂ ಆಯಿತೆನ್ನಿ.

### ರಾಜಕೀಯ ಕೈದಿಗಳ ಆಗಮನ

ಹೀಗೆಯೇ ಕಾಲ ಕಳೆಯಿತು. ೧೯೩೦ನೇ ಇಸವಿಯ ಅಂತ್ಯ ಭಾಗವದು- ಅಂದಿನ ದಿನಗಳಲ್ಲಿ ಪ್ರತಿ ದಿನ ಗುಂಪು ಗುಂಪಾಗಿ ಬಿಳಿ ಟೊಪ್ಪಿಯವರು ವೆಲ್ಲೂರು ಜೈಲಿನೊಳಗೆ ಬರಹತ್ತಿದರು. ಕೆಲವೇ ದಿನಗಳಲ್ಲಿ ಅವರ ಸಂಖ್ಯೆ ಸುಮಾರು ೩೦೦ ಕ್ಕೇರಿತು. ಅವರ ಬ್ಲೋಕುಗಳು ಬೇರೆಯೇ ಇದ್ದುದರಿಂದ ನಮಗವರೊಡನೆ ಹೊಕ್ಕು ಬಳಕೆಯಿರಲಿಲ್ಲ. ನಾವು ಕೆಲಸಕ್ಕೆ ಹೋಗುವಾಗ ಬರುವಾಗ ಧೋತಿ ಅಥವಾ ಬಿಳಿ ಚಲ್ಲಾಣ, ಉದ್ದ ಜುಬ್ಬ, ಬಿಳಿ ಟೊಪ್ಪಿಯಿಟ್ಟುಕೊಂಡು ಗಾಳಿ ಬದಲಾವಣೆಗಾಗಿ ಬಂದವರೆಂಬಂತೆ, ಹಾಯಾಗಿ ಅಡ್ಡಾಡುತ್ತಿದ್ದ ಗಾಂಧಿ ಕಡೆಯವರನ್ನು ಆಗಾಗ ಕಾಣುತ್ತಿದ್ದೆವು. ಅವರ ಉಲ್ಲಸಿತ ಮುಖ ಮುದ್ರೆಗಳು ನಮ್ಮನ್ನು ಬೆರಗುಗೊಳಿಸಿದ್ದವು. ಜೈಲಿನಲ್ಲಿ- ರಕ್ತದ ಬಣ್ಣದ ಬಗೆಯನ್ನು ಸಹಾ ಬದಲು ಮಾಡುವ ಆ ಜೈಲಲ್ಲಿ- ಇಂತಹ ಪ್ರಫುಲ್ಲ ವದನಾರವಿಂದಗಳನ್ನು ಕಾಣುತ್ತಿರುವೆವಲ್ಲ! ನಮಗದೊಂದು ಮಹಾ ಸೋಜಿಗ ದಿನ

ಹೋದಂತೆ ಜೈಲಧಿಕಾರಿಗಳು ಈ ಗಾಂಧಿ ಕಡೆಯವರಿಗೀಯುತ್ತಿರುವ ಮನ್ನಣೆ, ಅನುಕೂಲತೆಗಳ ರೀತಿಯನ್ನು ಕಂಡು ಅವರ ಭಾಗ್ಯಕ್ಕಾಗಿ ನಮಗೆ ಬಾಯಿ ನೀರೂರಿತು. ಈ ಭಾಗ್ಯವಂತರೂ ಪಾಪಿಗಳಾದ ನಮ್ಮೊಡನೆ ಸಲಿಗೆಯನ್ನು ಬೆಳೆಸುತ್ತಾ ಬಂದರು. ಅವರ ಸಂಪರ್ಕದಿಂದ ನಮಗಾಗುತ್ತಿದ್ದ ಆನಂದವನ್ನು ನಾನು ನಿಮಗೆ ಬರೆದು ತಿಳಿಸಲು ಶಕ್ತನಲ್ಲ; ನೀವೂ ಅದನ್ನೂ ಹಿಸಲಾರಿರಿ. ಒಪ್ಪತ್ತು ಅರೆಹೊಟ್ಟೆಯುಂಡು ದಿನ ತೆಗೆಯುವವನೊಬ್ಬನಿಗೆ ಒಂದುದಿನ ಮೃಷ್ಟಾನ್ನ ಭೋಜನ ಬಡಿಸಿ, ಆ ಹೊತ್ತಿನ ಅವನ ಮುಖಭಾವವನ್ನೊಮ್ಮೆ ಸೂಕ್ಷ್ಮವಾಗಿ ನೋಡಿರಿ. ಜಗತ್ತಿನ ಕುಬೇರರಾದ ರೋಕ್‌ಫೆಲ್ಲರರು ಇಲ್ಲವೆ ನಫೀಲ್ಡರು ಈ ವರೆಗೂ ಹೊಂದದಂತಹ ತೃಪ್ತಿಯ ಚಿಹ್ನೆಯನ್ನು ಆ ಸಮಯ ಆ ಬಡವನ ಮುಖದಲ್ಲಿ ಕಾಣವಿರಿ. ಗಾಂಧೀ ಕಡೆಯವರ ಸಂಪರ್ಕದಿಂದ ನಾವು ಹೊಂದಿದತೃಪ್ತಿಯ ಅಂತಹದೇ. ಪ್ರೀತಿ ಮತ್ತು ಸಹೋದರ ಭಾವಗಳು ಜೈಲಿನೊಳಗೆ ಬರಕೂಡದೆಂಬ ನಿಯಮವಿದೆಯೆಂಬ ಭಾವನೆಯಿತ್ತು ನನ್ನಲ್ಲಿ. ಅದನ್ನು ಈ ರಾಜಕೀಯ ಕೈದಿಗಳು ಸುಳ್ಳಾಗುವಂತೆ ಮಾಡಿದರು. ಊರಲ್ಲಿ, ನೆರೆಯವರೊಡನೆ ಸಂಜೆ ಹೊತ್ತಿಗೆ ಅಶ್ವತ್ಥ ಕಟ್ಟೆಯಲ್ಲಿಯೋ ಬಯಲಿನಲ್ಲಿಯೋ ಕುಳಿತುಕೊಂಡು ಸುಖದುಃಖ ಮಾತಾಡುವಂತಹ ಮರ್ಜಿಯಲ್ಲಿ ಈ ಬಿಳಿಟೊಪ್ಪಿಯವರು ನಮ್ಮ ಬಳಿಬಂದು, ನಮ್ಮ ಸಂಕಷ್ಟಗಳನ್ನು ಕೇಳಿ, ಸಮಾಧಾನ ಹೇಳಿ ಬೆನ್ನು ತಟ್ಟುವದಿತ್ತು. ಈ ಸೌಹಾರ್ದತೆಗೆ ಜೈಲಿನಲ್ಲಿ ದೊರೆಯುವಷ್ಟು ಬೆಲೆಯು- ಸಾರ್ಥಕತೆಯು ಇನ್ನೆಲ್ಲಿಯೂ ದೊರಕಲಾರದು ನಾವು, ಕೈದಿಗಳು ಊರವರ ದೃಷ್ಟಿಯಲ್ಲಿ ಅನ್ಯಾಯಗಾರರು; ಸರಕಾರದ ದೃಷ್ಟಿಯಲ್ಲಿ ಅಪರಾಧಿಗಳು; ಜೈಲಧಿಕಾರಿಗಳ ದೃಷ್ಟಿಯಲ್ಲಿ, ನಿಯಮ ಮಿತಿಯೆಂಬುದಿಲ್ಲದೆ ಇಚ್ಛೆಬಂದಂತೆ ತೇದು ಸವೆಯಿಸಬಹುದಾದ ವಸ್ತುಗಳು! ಇನ್ನು ಕೈದಿಗಳೊಳಗಾದರೂ ಬಾಂಧವ್ಯವುಂಟೆನ್ನುವಿರಾ? ಸುಡುಗಾಡಿನಲ್ಲಿ, ತನ್ನ ಜೆವರನ್ನು ತಾನೇ ಕುಡಿಯಬೇಕೆಂದು ನಾಲಿಗೆನೀಡವಷ್ಟು ಬೆಂದವನು, ಒಂದು ಬೊಗಸೆ ನೀರು ದೊರಕುವದಾದರೆ ಅದಕ್ಕಾಗಿ ಒಟ್ಟಿಗಿದ್ದ ಸಹೋದರನನ್ನು ಕೊಡ ಕೊಲೆಮಾಡಲಾರನೆ? ಹಾಗಿದೆ ಕೈದಿಗಳೊಳಗಿನ ಸಂಬಂಧ! ಒಬ್ಬನೊಂದು ಗಂಡುಕಾಯಿಯನ್ನು ಕದ್ದು ತಿಂದನಾದರೆ, ಕೆಲಸದಲ್ಲೇನಾದರೂ ಕಳ್ಳತನ ಮಾಡಿದನಾದರೆ, ಇನ್ನೊಬ್ಬ ಕೈದಿ ವಾರ್ಡರನ ಅನುಗ್ರಹಸಂಪಾದನೆಗಾಗಿ ಆದನ್ನು ಹೇಳಿಯೇ ಬಿಡುವನು. ಪ್ರತಿಯೊಬ್ಬನು ತನ್ನ ಒಂದೊಂದು ಕ್ಷಣವನ್ನೂ ಸುಗಮವಾಗಿ ತೆಗೆತೆಗೆಯುವದಕ್ಕಾಗಿ, ವಂಚನೆ, ಸುಳ್ಳು, ಕಳ್ಳತನಗಳನ್ನೇ ಆಶ್ರಯಿಸಬೇಕೆಂದಾದ ಮೇಲೆ ಅವನಲ್ಲಿ ಬಂಧುಭಾವ, ಸೌಹಾರ್ದತೆಯೆಲ್ಲಿಂದ? ಇಂಥವರಿಗೆ, ಪ್ರೀತಿಯನ್ನು ತೋರಿಸುವ ಅನುಕೂಲತೆ ಮತ್ತು ಶಕ್ತಿಯಿರುವ ಮಿತ್ರರು ದೊರಕುವದೆಂದರೆ ಆ ಕಾಲದಲ್ಲಿ ಅದಕ್ಕಿಂತ ದೊಡ್ಡ ಸ್ವರ್ಗಸುಖ ಇನ್ನಾವುದು?

## ನನ್ನ ಪಾಲಿನ ದೇವದೂತ!

ಒಂದು ದಿನ ನಾನು ಮೂತ್ರ ಸಂಖ್ಯೆಗೆಂದು ವಾರ್ಡರನ ಅಪ್ಪಣೆ ಪಡೆದು ಹೊರಬಂದಿದ್ದೆ ಕೆಲಸದ ಬ್ಲೋಕಿನಲ್ಲಿರುವವರೆಲ್ಲರೂ ಬಹುಮೂತ್ರದವರೆಂದು ನೀವು ತಿಳಿದುಕೊಳ್ಳಬಹುದು. ಕೆಲಸದ ಹೊತ್ತಿನಲ್ಲಿ ಏಳೆಂಟು ಸಲವಾದರೂ ವಾರ್ಡರನನ್ನು ವಂಚಿಸಿ, ಪ್ರತಿಯೊಬ್ಬ ಕೈದಿಯೂ ಹೊರಗೆ ಬಂದು ಹೋಗುತ್ತಾನೆ. ಇದಾವ ರೋಗವೆಂಬ ಗುಟ್ಟು ವಾರ್ಡರನಿಗೂ ಗೊತ್ತೇ ಇದೆ. ಆದರೆ ಮೂತ್ರ ಬರುವ ಮತ್ತು ಬಾರದಿರುವ ಹೊತ್ತಿನ ಗೊತ್ತು ವಾರ್ಡರನಿಗೂ ಇಲ್ಲ- ಅದು ಮಾತ್ರ ವಾರ್ಡರನ ಅಂಕೆಯೊಳಗಿನದಲ್ಲ! ಕೈದಿಯ ಇಡೀ ದೇಹವು, ಹೋಗುವುದಾದರೆ ಬರುವದಾದರೆ, ಅದು ಜೈಲು ನಿಯಮಕ್ಕೊಳಪಟ್ಟೇ ನಿರ್ಬಂಧದಲ್ಲಿರಬೇಕು; ಆದರೆ ದೇಹದೊಳಗಿನ ಪದಾರ್ಥಗಳನ್ನು ನಿರ್ಬಧಿಸಿಡಲು ಜೈಲು ಕಾನೂನಿಲ್ಲ. ಹೀಗಾಗಿ ವಾರ್ಡರನು, ದಿನಕ್ಕೇಳೆಂಟು ಸಲ ಅಪ್ಪಣೆ ಕೇಳಿದವರಿಗೂ ಮೂತ್ರಸಂಖ್ಯೆಗೆ ಹೋಗಲು ಒಪ್ಪಿಗೆಕೊಡುತ್ತಿದ್ದ. "ಹ್ಞಾ. ಬಾಂಛೋತ್! ಆಗ ಹೋದದ್ದು ಮಾತ್ರ- ಈಗ ಪುನಹ ಮೂತ್ರ! ಆಯ್ತು, ಹೋಗು ಕಳ್ಳ!" ಎಂದು ಹಲ್ಲುಕಿರಿದು ಬಿಡುತ್ತಿದ್ದ. ಇಂಥಹ ಬೈಗಳು ಜೈಲಿನ ಜನಪದ ಸಾಹಿತ್ಯಗಳು! ಅವುಗಳ ಕುರಿತು ವಾರ್ಡರನಾಗಲೀ ನಾವಾಗಲೀ ಪ್ರತ್ಯೇಕ ಲಕ್ಷ್ಯವೀಯುವ ಕ್ರಮವಿಲ್ಲ. ನಾನೂ ಮೂತ್ರಸಂಖ್ಯೆಗೆಂದು ಹೊರಗೆ ಬಂದು ಗೋಡೆ

ಯಡ್ಡ ನಿಂತ ಕೊಂಡು ಕೆಂಪಾದ ಆಂಗ್ಯೆಯನ್ನು ನೋಡುತ್ತಾ 'ಹೂ' ಎಂದು ಅದರ ಆರೈಕೆ ಮಾಡುತ್ತಿದ್ದೆ. ಆಗಲೇ ಗಾಂಧಿ ಟೊಪ್ಪಿಯವರೊಬ್ಬರು ನಾನಿದ್ದಲ್ಲಿ ಬೇಗ ಬೇಗನೇ ಬರುತ್ತಿರುವದನ್ನು ಕಂಡೆ. ಅವರು ನನ್ನನ್ನು ಸಮೀಪಿಸಿ, ನನ್ನ ಹೆಸರು, ಊರು, ತಾಯಿಯ ಹೆಸರನ್ನೆಲ್ಲಾ ಒಂದೊಂದಾಗಿ ಹೇಳಿ 'ನೀನು ಅವನಲ್ಲವೇ?' ಎಂದು ಕೇಳಿದಾಗ 'ಹೌದು' 'ಹೌದು' ಎಂದು ಹೇಳಲು ನನಗೆ ಸಂತೋಷದಿಂದ ಬಾಯಿ ಸಾಲದಾಯಿತು! ಅವರು ನಮ್ಮ ಜಿಲ್ಲೆಯ ಕಾಂಗ್ರೆಸ್ ಧುರೀಣರಲ್ಲೊಬ್ಬರು. ಗಾಂಧೀಗಲಾಟೆಯಿಂದಾಗಿ ಹದಿನೈದು ತಿಂಗಳುಗಳ ಶಿಕ್ಷೆಗೆ ಗುರಿಯಾದವರು. ನನ್ನ ನೆರೆಯೂರಿನವರಾದರೂ ಆ ವರೆಗೆ ನನಗವರ ಪರಿಚಯವಿರಲಿಲ್ಲ. 'ನಿನ್ನ ತಾಯಿ' ನನಗೆ ಶಿಕ್ಷೆಯಾಯಿತು ಎಂದು ಕೇಳಿದವಳೇ ನಾನಿದ್ದಲ್ಲಿ ದುಂಬ ಮಾತಾಡಿ ಹೋಗಿದ್ದಾಳೆ. ನಿನ್ನ ಯೋಗಕ್ಷೇಮವನ್ನು ವಿಚಾರಿಸಿಕೊಂಡಿರಬೇಕು; ಮನೆಯಲ್ಲಿ ಎಲ್ಲರೂ ಕ್ಷೇಮದಲ್ಲಿದ್ದಾರೆ ಎಂದು ತಿಳಿಸಬೇಕು-ಎಂದು ಹೇಳಿದ್ದಾಳೆ.'ಹೇಗಾದರೂ ನನ್ನ ಮಗನನ್ನು ನಾನು ಪುನಃ ನೋಡುವಂತೆ ಮಾಡಿ!' ಎಂದು ನನ್ನೊಡನೆ ಹೇಳಿ ಅತ್ತಳು. ನಾನವಳಿಗೆ ಸಮಾಧಾನ ಹೇಳಿದೆ. ನಿನಗೇನಾದರೂ ಬೇಕಾದರೆ ಹೇಳು. ನಾನು ನಿನಗೆ ಆಗಾಗ ಸಿಕ್ಕುತ್ತೇನೆ' ಎಂದವರು ತಿಳಿಸಿದಾಗ ನನ್ನ ಕಣ್ಣಿನಲ್ಲಿ ನೀರು ಬಂತು. ನಾನು ಎರಡು ಮಿನಿಟಿನ ವರೆಗೆ ಬಿಕ್ಕಿ ಬಿಕ್ಕಿ ಅತ್ತುಬಿಟ್ಟೆ. ಅವರು ನನ್ನನ್ನು ಬೇಕಾದಷ್ಟು ಸಮಜಾಯಿಸಿದರು; ನನ್ನ ಎಲ್ಲಾ ಸಂಕಷ್ಟಗಳನ್ನು ಕೇಳಿ ತಿಳಿದುಕೊಂಡರು. ಅಂದಿನಿಂದ ನನ್ನ ಕಣ್ಣು ಮತ್ತು ಮೂಗಿನಲ್ಲಿ ಧಾರಾಕಾರವಾಗಿ ಸುರಿಯುತ್ತಿದ್ದ ನೀರಿಗೆ ಎಳಗಿಂದೊಳಗೆ ಅಣೆಕಟ್ಟು ಕಟ್ಟಿದಂತಾಯಿತು. ಕಣ್ಣುಗಳಲ್ಲಿ ನೀರು ಸುರಿಯುವ ರೋಗವು, ಅದು ಪ್ರತಿಯೊಬ್ಬರಿಗೂ ಅಂಟುವ ಜೈಲು ರೋಗ; ನನಗೆ ನಸ್ಯಸೇದುವ ಅಭ್ಯಾಸವಿದ್ದುದರಿಂದ, ಜೈಲಿಗೆ ಬಂದಂದಿನಿಂದ ಮೂಗಿನಲ್ಲೂ ಸರಾಗವಾಗಿ ನೀರು ಸುರಿಯುತ್ತಿತ್ತು. ನಾನು ಹುಡಿಯಿಲ್ಲದೆ ಹುಚ್ಚನಾಗಿ ಹೋಗಿದ್ದೆ. ಕೈದಿಗಳನ್ನು 'ರೈಸ್, ಡೌನ್, ಮಾರ್ಚ್' ಮಾಡುವ ಅಂಗಣದಲ್ಲಿ ಸಾಕಷ್ಟು ಹದವಾದ ಧೂಳಿಯು ದೊರಕುತ್ತಿತ್ತು. ಇದು ಅತಿಶಯೋಕ್ತಿಯೆಂದು ಭಾವಿಸಬೇಡಿ- ನನ್ನ ಸೊಳ್ಳೆಗಳ ಹುರುಪನ್ನು ತಡೆಯಲಾಗದೆ, ನಾನು ಆ ಪವಿತ್ರ ಪಾದಧೂಳಿಯನ್ನು ಹಲವು ಸಲ ಆಘ್ರಾಣಿಸಿ, ಪುರಾಣಗಳಲ್ಲಿ ಹೇಳುವ ಮಾದರಿಯ 'ಕೈದಿ ಭಕ್ತ' ನಾಗಿದ್ದೆ! ಮೇಲಿನ ಮಹನೀಯರು ದೇವದೂತನಂತೆ ಶುಭಸಂದೇಶವನ್ನು ಅರುಹಿ ಹೋದ ಮರುದಿನ ಸಾಯಂಕಾಲದ ಊಟ ಮುಗಿದು ಗೂಡು ಸೇರುವ ಮೊದಲು ನಾನು ಸ್ವಲ್ಪ ಆ ಕಡೆಗೆ ಹೊರಟೆ. ನನ್ನ ಕಣ್ಣುಗಳು ಆ ಮಹನೀಯರಿಗಾಗಿ ನಾಲ್ಕೂ ದಿಕ್ಕುಗಳ ಸುತ್ತು ತೆಗೆದವು. ವಾರ್ಡರರು ಇನ್ನೊಂದು ಬದಿಯಲ್ಲಿದ್ದರು-ಕೈದಿಗಳು ಆ ಗಡಿಯೊಳಗೆ, ಆಚೆಯೀಚೆ ನಾಲ್ಕು ನಾಲ್ಕು ಹೆಜ್ಜೆಯಿಡುತ್ತಿದ್ದರು. ನಾನು ಬೇರೆ ದಿಕ್ಕನ್ನು ನೋಡುತ್ತಿರುವಾಗ ನನ್ನ ಕಾಲಬುಡಕ್ಕೇನೋ ಬಂದು ಬಿದ್ದ ಸದ್ದಾಯಿತು. ಜೈಲಿನೊಳಗೆ ಇಂತಹ ಸದ್ದು ಬೆನ್ನ ಬುಡದಲ್ಲಿ ಆಗುವದು ಹೊರತು ಕಾಲ ಬುಡದಲ್ಲಾಗುವದು ಬಹಳ ಅಪರೂಪ! ನನಗೆ ಆ ಕ್ಷಣದಲ್ಲಿ, ಹಣ್ಣಾಗುವ ವೇಳೆ ಊರ ಮಾವಿನ ಮರದ ಅಡಿಯಲ್ಲಿ ನಿಂತವನಿಗುಂಟಾಗುವಂತಹ ಒಂದು ಪ್ರಜ್ಞೆ ಬಂದು ಕೆಳಗೆ ಬಗ್ಗಿದೆ. ಮಾವಿನ ಹಣ್ಣಿನ ಅಥವಾ ಸಣ್ಣ ರಬ್ಬರ್ ಚೆಂಡಿನ ಗಾತ್ರದಷ್ಟು ದೊಡ್ಡ ಒಂದು ಕಾಗದದ ಕಟ್ಟು ಬಿದ್ದುಕೊಂಡಿತ್ತು. ಅದನ್ನು ಥಕ್ಕನೆ ಹೆಕ್ಕಿ, ಯಾವ ಕಡೆಯಿಂದ ಬಂತಿದು ಎಂದು ನೋಡುತ್ತೇನೆ- ಅಲ್ಲೆ ನಾಲ್ಕು ಮಾರು ದೂರದಲ್ಲಿ 'ಒಳಗಿಟ್ಟುಕೊಂಡು ಹೋಗು' ಎಂದು ಸನ್ನೆಮಾಡುತ್ತಾ ಆ ಗಾಂಧಿ ಕಡೆಯವರು ನಿಂತಿದ್ದಾರೆ! ಸಂತೋಷದಿಂದ ಅದನ್ನು ಚಡ್ಡಿಯೊಳಗೆ ಸೇರಿಸಿಕೊಂಡೆ. ಅಷ್ಟರಲ್ಲಿ ನಾವು ಗೂಡು ಸೇರಬೇಕಾದ ಘಂಟೆಯಾಯಿತು. ಎಲ್ಲರನ್ನೂ ಬ್ಲೋಕಿನೊಳಗೆ ಸೇರಿಸಿ ಬೀಗ ಹಾಕಿದರು. ಬ್ಲೋಕಿನೊಳಗೆ ನನ್ನ ಕಂಬಳಿಯ ಸುರುಳಿಯೊಳಗಡೆ ಆ ಮುದ್ದೆಯನ್ನು ಮೆಲ್ಲನೆ ಬಿಚ್ಚಿದ. ಅದು ಗಮಗಮಿಸುವ ನಸ್ಯ! ನಾನು ದಿನಂಪ್ರತಿ ಹಂಬಲಿಸಿ ಹಂಬಲಿಸಿ, ಬಾಯಿ, ಕಣ್ಣು ಮೂಗುಗಳಲ್ಲಿ ನೀರೂರಿಸುತ್ತಿದ್ದ ನನ್ನ ಪ್ರಾಣಾವಶ್ಯಕ ನಸ್ಯ! ಊರಲ್ಲಿಯಾದರೂ ಎಂಟಾಣೆ ತೆರಬೇಕಾದೀತು— ಅಷ್ಟು ದೊಡ್ಡ ಮುದ್ದೆ! ಮೆಲ್ಲ ಮೆಲ್ಲಗೆ ಸಾಯುತ್ತಾ ಬರುತ್ತಿದ್ದ ಜೀವವು ಒಂದೇ ಭರತಕ್ಕೆ ತುಂಬಿ ಬಂದಂತಾಗಿ ಅದರಲ್ಲಿ ಅರೆವಾಸಿಯಷ್ಟನ್ನು ಬೇರೆಯೇ ಕಟ್ಟಿ ಕಂಬಳಿಸುರುಳಿಯೊಳಗೆ ತುರುಕಿ

ಸಿಟ್ಟೆ; ಉಳಿದರ್ಧವನ್ನು ಮುಷ್ಟಿಯೊಳಗೆ ಹಿಡಿದು ಕೊಂಡು ಬ್ಲೋಕಿನ ನಡು ಭಾಗಕ್ಕೆ ಬಂದು ನಿಂತು ಕೊಂಡೆ. 'ನಿಮಗೀ ಹೊತ್ತು ದೊಡ್ಡ ಹಬ್ಬಮಾಡುತ್ತೇನೆ; ಇದೇನೆಂದು ಹೇಳಿನೋಡೋಣ!' ಎಂದು ಎಲ್ಲರನ್ನೂ ಕರೆದೆ. ಕಾಗೆ ಹಿಂಡಿನಂತೆ ಎಲ್ಲರೂ ಸುತ್ತು ಗಟ್ಟಿ 'ಕೆಂರೆ ಕೆಂರೆ' ಎನ್ನಲಾರಂಭಿಸಿದರು. 'ನೀವು ಹೇಳಿದ್ದಿಲ್ಲಾ ಸುಳ್ಳು, ನೋಡಿ' ಎಂದು ಕೈಬಿಚ್ಚಿದ್ದೇನೆ ಮಾತ್ರ- ಸುಮಾರು ನೂರು ಕೈಗಳು ಒಂದೇ ಸಲಕ್ಕೆ ನನ್ನ ಕೈಯ ಮೇಲೆ ನುಗ್ಗಿದವು. ಅವರ ಆಕ್ರಮಣದಿಂದ ನನ್ನ ನಸ್ಯವನ್ನು ಹೇಗೂ ಕಾಪಾಡಿ, ಎಲ್ಲರಿಗೂ ಒಂದೊಂದು ಚುಟುಕಿನಷ್ಟು ಕೊಡುತ್ತಾ ಬಂದೆ. ಅವರೆಲ್ಲಾ ಜೀವ ವೆಳೆಯುವವರಂತೆ ನಸ್ಯವೆಳೆದರು! ಆ ರಾತ್ರಿ ನಮ್ಮ ಬ್ಲೋಕಿನೊಳಗಿನ ಸಂತೋಷ ಕೋಲಾಹಲವನ್ನು ವರ್ಣಿಸಲು ಸಾಧ್ಯವಿಲ್ಲ. ಆ ನಸ್ಯದೊಳಗಿನ ಒಂದೇ ಒಂದು ಅಣು ವಾದರೂ ಭೂಮಿಗೆ ಬಿದ್ದು ಹಾಳಾಯಿತೆಂದಿಲ್ಲ; ಬದಲಾಗಿ ಬ್ಲೋಕಿನೊಳಗಿನ ಧೂಳಿನ ಅಣುಗಳು ನಸ್ಯದೊಡನೆ ಸೇರಿ ಕೆಲವರ ಮೂಗಿನೊಳಗೆ ಹೋಗಿರಬಹುದು! ನಾನು ಆ ದಿನ ಎಂತಹ ಅಪರೂಪದ ವಸ್ತುವನ್ನೊದಗಿಸಿಕೊಟ್ಟು, ಆ ಬ್ಲೋಕಿಗೆಷ್ಟು ದೊಡ್ಡ ಉಪಕಾರ ಮಾಡಿದೆ!

**ಬೀಡಿಯ 'ಕಟ್ಟು!- ಕಟ್ಟಳೆ?'**

'ಕಟ್ಟು-ಕಟ್ಟಳೆ' ಎಂದರೆ ಒಂದೇ ಶಬ್ದವೆಂದಾಗಲೀ, ಅದಕ್ಕೊಂದೇ ಅರ್ಥವೆಂದಾಗಲೀ ನೀವು ಭಾವಿಸಿರಬಹುದು. ಆದರೆ ಜೈಲಿನೊಳಗೆ ಬೀಡಿಯ 'ಕಟ್ಟು' ಮತ್ತು ಜೈಲಿನ 'ಕಟ್ಟಳೆ' ಇವು ಪರಸ್ಪರ ವಿರುದ್ಧವಾದವುಗಳು. ಪುಡಿ, ಬೀಡಿ, ವೀಳ್ಯ ಅಫೀಮು- ಇವು ಯಾವುವೂ ಜೈಲಿನೊಳಗೆ ಬರಕೂಡದು, ಬಂದಲ್ಲಿ-ತಂದಲ್ಲಿ ಅದಕ್ಕಾಗಿ ಪ್ರತ್ಯೇಕ ಶಿಕ್ಷೆಯಿದೆ. ಆದರೆ ರಾತ್ರಿ ಬ್ಲೋಕಿನೊಳಗೆ, ಹಗಲು ಗೋಡೆಯ ಬದಿಯ ಸಂದು ಮೂಲೆಗಳಲ್ಲಿ ನಾವು ಆಗಾಗ ಹೊಗೆ ಬಿಡುವದಿತ್ತು. ಈ ಕ್ರಮವು ವಿಶೇಷವಾಗಿ ರಾಜಕೀಯ ಕೈದಿಗಳು ಬಂದ ನಂತರವೇ ಜಾರಿಯಾಯಿತೆನ್ನಬಹುದು. ಗಾಂಧಿ ಟೊಪ್ಪಿಯವರನ್ನು ಕಂಡಷ್ಟು ಸಲವೂ ಕ್ರಿಮಿನಲ್ ಕೈದಿಯು ತನ್ನ ಹತ್ತು ಬೆರಳುಗಳಲ್ಲಿ ಯಾವುದಾದರೊಂದನ್ನೆತ್ತಿ ತೋರಿಸಿ, ಮುಖ ಬಾಡಿಸಿ ನಿಲ್ಲುವನು. ವಾರ್ಡರನು ಬೇಕಾದರೆ ಬದಿಯಲ್ಲೇ ನಿಂತಿರಲಿ, ಗಾಂಧಿ ಟೊಪ್ಪಿಯವನು ಈ ಕೈದಿಯನ್ನು ಹಾದು ಹೋಗುವವನಂತೆ ಹತ್ತಿರಕ್ಕೆ ಬಂದು,ಒಂದೇ ಎರಡೋ ಬೀಡಿಯನ್ನು ಕೆಳಗೆ ಹಾಕಿ ಹೋಗಿ ಬಿಡುವನು. ಕೈದಿಯದನ್ನು ಅನುಕೂಲವಾದರೆ, ಕೈಯಿಂದ ಇಲ್ಲವಾದರೆ ಕಾಲಿನಿಂದ ಎತ್ತಿಕೊಂಡು, ಚಡ್ಡಿಯೊಳಗೆ ತಯಾರಿಸಿಕೊಂಡಿದ್ದ ತೂತಿನೊಳಗೆ ಸಿಕ್ಕಿಸಿಕೊಳ್ಳುವನು. ಬ್ಲೋಕಿನೊಳಗೆ ಇಡೀ ರಾತ್ರಿ 'ಲಾಟಾನು' ಉರಿಯುತ್ತಲೇ ಇರುತ್ತದೆ. ಒಬ್ಬನ ಹೆಗಲಿಗಿನ್ನೊಬ್ಬ ಹತ್ತಿ ಆ ಲಾಟಾನಿನಿಂದ ಬೀಡಿ ಹೊತ್ತಿಸಿ ವಿಜಯೀ ಸವಾರನಂತೆ ಧುಮ್ಮಿಕ್ಕಿ ಒಂದು ದಮ್ಮು ಎಳೆದೊಡನೆ, ಆ ಬೀಡಿ ಇನ್ನೊಬ್ಬನ ಕೈಗೆ ಹೋಗುವದು. ಅವನಿಗೂ ಒಂದೇ ದಮ್ಮು- ಆ ಕೂಡಲೇ ಇನ್ನೊಬ್ಬನಿಗೆ. ಆ ಮೇಲೆ ಮತ್ತೊಬ್ಬನಿಗೆ. ಪಕ್ಕಾ ಮನುಷ್ಯನಾಗಿದ್ದರೆ ಉಸಿರುಕಟ್ಟಿ ಎರಡು ಮೂರು ದಮ್ಮು ಎಳೆದು ಕೈಬದಲಾಯಿಸುವದಿದೆ. ಹಾಗೆ ಒಂದು ದಮ್ಮಿಗಿಂತ ಹೆಚ್ಚಿಗೆ ಎಳೆಯುವ ಸಾಹಸಪಟ್ಟವನು ಹಲವು ಖಂಡನಾತ್ಮಕ ಸೂಚನೆಗಳನ್ನು ಕೇಳಬೇಕಾಗುವದು. ಮತ್ತೂ ಗಟ್ಟಿ ಹಿಡಿದುಕೊಂಡನಾದರೆ ಖಂಡಿತವಾಗಿ ಮಿಕ್ಕವರಿಂದ ಗುದ್ದು ತಿನ್ನಬೇಕಾಗುವದು! ಹೀಗೆ ಒಂದು ಬೀಡಿ, ಬೆಂಕಿತಾಗಿ ಮುಗಿಯುವ ವರೆಗೆ ಸರಾಸರಿ ಇಪ್ಪತ್ತು ಜನರ ಕೈಬಾಯಿಯನ್ನಲಂಕರಿಸಿ, ಆ ಮೇಲೆ ಯಾವುದಾದರೊಂದು ತೂತಿನೊಳಗೆ, ಸೇರಿ ಹೋಗುವದು; ಅಥವಾ ಅಂತರ್ಧಾನವಾಗುವದೆಂದರೂ ಸರಿಯೇ. ಒಂದು ಬೀಡಿಯೊಡನೆ ಇನ್ನು ಕೆಲಸವಿಲ್ಲವೆಂದಾಗಬೇಕಾದರೆ, ಜೈಲಿನೊಳಗಿರುವವರ ಪೈಕಿ, ತೆಳ್ಳಗಿನ ತುಟಿಯುಳ್ಳವನ ತುಟಿಯು ಮುಟ್ಟವನ್ನು ಮೀರಿ ಹೊರಗಿಣುಕದಷ್ಟು ಆ ಬೀಡಿ ಸಣ್ಣದಾಗಬೇಕು! ಅಲ್ಲಿ ತನಕವೂ ಅದರ ಉಪಯೋಗವಿದೆ. ಅಂತು, ಖಾಂಡವವನ ದಹನ ಕಾಲದಲ್ಲಿ ಅರ್ಜುನನ ಆಗ್ನೇಯಾಸ್ತ್ರಕ್ಕಿದ್ದಷ್ಟೇ ಸರ್ವವ್ಯಾಪಕ ಶಕ್ತಿಯು ಜೈಲಿನೊಳಗಣ ಒಂದು ಬೀಡಿಗಿದೆ!

**ಈ ಬೀಡಿ, ಪುಡಿಗಳು ಯಾವ ತಪ್ಪು ಮಾಡಿ ಹೇಗೆ ಜೈಲಿನೊಳಗೆ ಬಂದವು? — ಈ ಪ್ರಶ್ನೆ ನಿಮ್ಮಲ್ಲುತ್ಪನ್ನವಾಗಿರಬಹುದು. ಉತ್ತರ ಬರುವ ವಾರದ ಸಂಚಿಕೆಯಲ್ಲಿ.**

# "ಒಳಗೆ - ಹೊರಗೆ"

ಶ್ರೀ. ದೊಡ್ಡೇರಿ.

'ನಿನ್ಗಂಡ ಮಿಲ್ಕೂಲಿಗಾರ್ರಿಗಾಗಿ ಬಹಳ ಕಷ್ಟ ಪಡ್ತಿದಾನಂತೆ'

'ಆ . . . .'

'ಕೂಲಿಗಳ ಸಂಬಳ ಹೆಚ್ಮಾಡ್ಬೇಕೂ ಎಂದು'

'ಆ . . . .'

'ಆ ಏನು? ಯಾವ ಕಡೆ ಆಲೋಚ್ನೆ?'

'ಎಲ್ಲಿ ಏನಾಲೋಚ್ನೇನೂ ಇಲ್ವಲ್ಲಾ.'

'ಮಾತು ಮಾತಿಗೂ ಸುಮ್ನೆ ಆ! ಆ! ಅಂತೀಯ'

'ಇ . . . ಲ್ಲ . . .'

'ಮತ್ತೆ ನಾ ಹೇಳಿದ್ಮೇಲೆ ನಿನ್ಗಂಡನ ವಿಚಾರಕ್ಕೆ ಸಂತೋಷ ಪಡ್ತೀಯಾ?'

'ಏನ್ಮಹಾ ಕೆಲ್ಸಾಂತ ಸಂತೋಷ?'

'ಮಹಾ ಕೆಲ್ಸಾಂತ ಅಲ್ಲ. ಮಿಲ್ಕೂಲಿಗಾರ್ರಿಗೆ ಸಂತೋಷವಲ್ಲವೆ?'

'ಅವರಿಗಾಗಬಹುದು.'

'ನಿನಗೆ?'

'ಅವರಿಗೆ ಸಂತೋಷವಾದ ಮಾತ್ರಕ್ಕೆ ನನಗಾಗ ಬೇಕೂಂತಿದೆಯೇನು?'

'- - - - -'

'- - - - -'

'ಈ ಗಲಾಟೆಯಲ್ಲಾ ಏನು?'

'ಯಾವ ಗಲಾಟೆ?'

'ನಿನ್ನೆ ರಾತ್ರಿ ನಿಮ್ಮ ಮನೇಲಿ ನಡೆದದ್ದು?'

'ಅದೆ! ಮಾಮೂಲು ತಾನೆ'

'ಆದ್ರೂ ನಿನ್ನೆ ಏನೋ ಹೆಚ್ಗೆ ಇರ್ಬೇಕು'

'ಏನಿಲ್ಲಾ. ನನ್ನ ಸಿನಿಮಾಕ್ಕೆ ಕರ್ಕೊಂಡ್ಹೋಗ್ರೀ ನೀಂತಂದಿದ್ರು.'

'ಹುಂ'

'ಬೇಗ ಅಡಿಗೆ ಮುಗಿಸೋಣಾಂತ ಶುರುಮಾಡ್ದೆ'

'ಹುಂ'

'ಆಗಸರವನು ಬಟ್ಟೆ ತಂದ್ಕೊಟ್ಟಿಲ್ಲ. ಇದ್ದದ್ದೆಲ್ಲಾ ಮಾಸಿಹೋಗಿತ್ತು'

'ಹೂಂ'

'ಈ ಮಧ್ಯೆ ಲ್ಯಾಂಪ್ ಬೇರೆ ಒಡೆದುಹೋಯ್ತು.'

'- - -'

'ಎಂಟು ಘಂಟೆಯಾದ್ರೂ ಅವರು ಮನೆಗೇ ಬರಲಿಲ್ಲ'

'ಹುಂ'

'ಅಂತು ಒಂಭತ್ತು ಘಂಟೆಗೆ ಬಂದ್ರು ನಾಲ್ಕಾರು ಕೂಲಿಗಳೊಡನೆ'

'ಅಂತೂ ಸಿನಿಮಾ ಇಲ್ಲ?'

'ಅದಕ್ಕೆ ಸಿಟ್ಟಾದುದು ಮತ್ತೆ!'

'ಆ ಮೇಲೆ?'

'ಹೊತ್ತಿಲ್ಲ ಗೊತ್ತಿಲ್ಲ, ಕೂಲೀನ್ನ ಉದ್ಧರಿಸ್ತೀನೀ ಅಂತ ಹೋಗೋದು, ಮನೇ ಹೆಂಗಸ್ರನ್ನ ಕೂಲೀಗಿಂತ ಕೀಳಾಗಿ ಕಾಣೋದು' 'ಹುಂ' 'ಕೂಲಿಗಳನ್ನುದ್ಧಾರ ಮಾಡ್ತೀನೀಂತ ನಮ್ಮನ್ನ ಮರ್ತುಬಿಟ್ರೆ?'

'ನಿಮ್ಮನ್ನ ನೆನಪು ಮಡ್ಕೊಳ್ಳೋದು, ನಿಮ್ಮನ್ನ ಉದ್ಧಾರಮಾಡೋದು ಎಲ್ಲಾ ಅವನ ಧರ್ಮಕ್ಕೇ ಸೇರಿತ್ತಲ್ಲವೆ ಮಂಟಪದಡಿಯಲ್ಲಿ?'

# ಮುಜರೆ - - - - - - - - - - - - ೩

ಕತೆಗಾರಃ
**'ಹರಿದಾಸ,' ಮೂಲ್ಕಿ.**

ಮನುಷ್ಯರೆಲ್ಲರ ಗುಣವು ಒಂದೇ ತೆರನಾಗಿರುವುದಿಲ್ಲ. ಒಬ್ಬರಲ್ಲಿ ಸದ್ಗುಣಗಳಿದ್ದರೆ ಮತ್ತೊಬ್ಬರಲ್ಲಿ ತದ್ವಿರುದ್ಧವಾದ ದುರ್ಗುಣಗಳಿರುತ್ತವೆ. ಒಬ್ಬನು ಸ್ವಾರ್ಥತೆಯಲ್ಲಿ ನಿಷ್ಣಾತನಿದ್ದರೆ ಮತ್ತೊಬ್ಬನು ಪರರಿಗಾಗಿ ಸರ್ವಸ್ವವನ್ನು ಕಳಕೊಳ್ಳುತ್ತಾನೆ. ಹೀಗೆ ವಿವಿಧ ಗುಣಪೂರಿತವಾದೀ ಜಗತ್ತಿನಲ್ಲಿ ಬಡತನದ ಬೇಗೆಯಿಂದ ಬಳಲಿ ಬೆಂಡಾದ ಓರ್ವ ನಿರ್ಭಾಗ್ಯನು ಅನುಭವಿಸಿದ ವಿವಿಧ ವಿಚಾರಗಳನ್ನು ಕಥಾರೂಪದಿಂದ ಕೊಡಲಾಗುವುದು. ಇದನ್ನು ತನುಗೆಂದು ಅನ್ವಯಿಸಿಕೊಂಡು ಬೇಸರಪಡಬಾರದಾಗಿ ಅನುಭವಿಯ ಪರವಾಗಿ ಲೇಖಕನ ವಿಜ್ಞಾಪನೆ.

೦ ೦ ೦

“ಈ ಆಜ್ಞಾಪನಾ ಪತ್ರವನ್ನೋದಿದವರೇ ನೀವು ನಮ್ಮಲ್ಲಿ ಹಾಜರಾಗತಕ್ಕದು. ನಿಮಗಾಗಿ ಒಂದು ಉದ್ಯೋಗವನ್ನು ಕಾದಿಡಲಾಗಿದೆ. ಸುಸ್ತು ಮಾಡಬಾರದಾಗಿ ಸೂಚನೆ.”

ಇದು ನಮ್ಮ ರಾಮುವಿಗೆ ಅದೊಂದು ದೊಡ್ಡ ಕಂಪೆನಿಯ ಮ್ಯಾನೇಜರರು ಕಳಿಸಿದ ಆಜ್ಞಾಪನಾ ಪತ್ರ. ರಾಮುವು ತನ್ನ ಊರಲ್ಲೇ ಸಣ್ಣ ಉದ್ಯೋಗದಲ್ಲಿದ್ದುಕೊಂಡು ಸಿಗುವ ಯತ್ಕಿಂಚಿತ್ ವೇತನದಿಂದ ಸಂಸಾರವನ್ನು ನಡಿಸುತ್ತಿದ್ದನು. ತನಗೆಲ್ಲಾದರೂ ಒಂದು ಯೋಗ್ಯ ಕೆಲಸವನ್ನು ಸಂಸಾರ ನಡಿಸಲು ಸಾಕಾಗುವಷ್ಟು ವೇತನದೊಡನೆ ತೆಗಿಸಿಕೊಡಬೇಕೆಂದು ಅವನ ಮಿತ್ರನೋರ್ವನೊಡನೆ ಒಮ್ಮೆ ಹೇಳಿದ್ದನು. ಆದರೆ ಅವನು ತನ್ನ

೦

ಸಲುವಾಗಿ ಇಷ್ಟೂ ಪರಿಶ್ರಮ ಪಟ್ಟು ಕೃತಕೃತ್ಯನಾದಾನೆಂದು ರಾಮುವು ಎಣಿಸಿದ್ದಿಲ್ಲ. ಮೇಲಿನ ಪತ್ರವನ್ನು ಓದುತ್ತಿದ್ದ ಅವನಿಗೆ ಸ್ವರ್ಗವೇ ತನ್ನೆದುರಾಗಿ ನಿಂತಂತೆ ಭಾಸವಾಯಿತು. ಭಾವೀ ಸುಖಮಯ ಸಂಸಾರ ಚಿತ್ರಗಳು ಸಮುದ್ರದಲೆಗಳಂತೆ ಒಂದರ ಹಿಂದೊಂದಾಗಿ ತೋರಲಾಂಭಿಸಿದುವು. ಅನುಜ್ಞೆಯ ಪ್ರಕಾರ ಅವನು ಹೊರಡಲನುವಾದನು. ಆದರೆ- ಹೋಗಲು ದಾರಿ ಖರ್ಚಿಗೆ? ಕೈಯಲ್ಲಿ ಬಿಡಿಕಾಸಿಗೆ ಗತಿಯಿದ್ದಿಲ್ಲ. ಅನೇಕರನ್ನು ಕೇಳಿ ನಿರಾಶೆಗೊಂಡು ಕೊನೆಗೆ ತನ್ನ ಪತ್ನಿಯ ಮೈಮೇಲಿನ ಆಭರಣವೊಂದನ್ನು ಎರವಾಗಿ ಇರಿಸಿ ಹಣವನ್ನು ಪಡೆದು- - - - ಊರಿಗೆ ಹೋಗಿ ಆಫೀಸಿನಲ್ಲಿ ಹಾಜರಾದನು.

೦ ೦ ೦

ಒಂದು ತಿಂಗಳು ದಾಟಿತು. ನೌಕರರೆಲ್ಲರೂ ವೇತನವನ್ನು ಪಡೆದರು. ರಾಮುವಿಗೂ ಕರೆಬಂದಿತು. ತನಗೆಷ್ಟು ವೇತನ ಕೊಡುವರೋ- ಆ ಹಣದಲ್ಲಿ ತಾನೆಷ್ಟು ಖರ್ಚಿಗಾಗಿಟ್ಟು ಕೊಳ್ಳುವುದು, ಮನೆಗೆಷ್ಟು ಕಳಿಸುವುದು, ಎಂದು ಮೊದಲಾದ ವಿಚಾರವನ್ನೆಣಿಸುತ್ತ ಅವನು ಮ್ಯಾನೇಜರರ ಬಳಿ ಹೋದನು. ಆದರೆ- ಹಣ ಸಿಗುವ ಬದಲಿಗೆ- ಅವರಿಂದ 'ನೀವಿನ್ನು ನಮ್ಮ ಕಂಪೆನಿಯಲ್ಲಿ ಮೂರು ತಿಂಗಳುಗಳ ಎಪ್ರೆಂಟಿಸ್ ಕೋರ್ಸ್ ಮುಗಿಸಬೇಕಾಗಿದೆ. ಅನಂತರ ನಿಮಗೆ ತಲಬು ನಿಶ್ಚಯಿಸಲ್ಪಡುವುದು.' ಎಂಬ ಗಂಭೀರ ವಾಣಿಯು ಕೇಳಿ ಬಂದಿತು. ಇದನ್ನು ಕೇಳಿದ ರಾಮುವಿನ ಮನಸ್ಸಿನ ಮಂಡಿಗೆಯು ಕಲ್ಲಾಯಿತು. ಪೆಚ್ಚು ಮುಖಮಾಡಿಕೊಂಡು ಹೊರ ಬಂದನು. ಅವನ ಸಹೋದ್ಯೋಗಿಗಳು ತಮಗೂ ಈ ರೀತಿ ಎಪ್ರೆಂಟಿಸ್ ಕೋರ್ಸ್ ಇದ್ದಿತೆಂದೂ, ಅದಕ್ಕಾಗಿ ಬೇಸರಪಡಬಾರದೆಂದೂ ಸಮಾಧಾನ ಮಾಡಿದರು. ರಾಮುವು ಏನೋ ಒಂದು ನಿರ್ಧಾರದಿಂದ ಯಥಾರೀತಿ ಕೆಲಸದಲ್ಲಿ ತೊಡಗಿದನು.

೦ ೦ ೦

ಮೂರು ತಿಂಗಳುಗಳು ಕಳೆದುವು. ಈ ಮಧ್ಯೆ ಹಲವು ಮಂದಿ ಕಂಪೆನಿಗೆ ಸೇರಿ ಹತ್ತಿಪ್ಪತ್ತು ದಿನಗಳ ಎಪ್ರೆಂಟಿಸ್ ಕೋರ್ಸ್ ಮುಗಿಸಿ ಅನಂತರ ಸಂಬಳ ಪಡೆಯುತ್ತಿರುವುದನ್ನು ರಾಮುವು ಕಣ್ಣಾರೆ ಕಂಡನು. ಆದರೂ ಆಕ್ಷೇಪವೆತ್ತಿದ್ದಿಲ್ಲ. ಎತ್ತಿದರೆ ಕೇಳುವವರೂ ಇದ್ದಿಲ್ಲ. ಅವನ ಪರವಾಗಿ ಸಹಾನುಭೂತಿಯನ್ನು ತೋರಿಸುತ್ತಿದ್ದ ಕೆಲವು ನೌಕರರಾದರೂ ಈ ವಿಚಾರಕ್ಕಾಗಿ ವಿಸ್ಮಯಪಡುತ್ತಿದ್ದರಾದರೂ, ಮ್ಯಾನೇಜರರನ್ನೆದುರಿಸುವ ಧೈರ್ಯವಿಲ್ಲದವರಾಗಿ ಉಸಿರೆತ್ತಲಿಲ್ಲ. ರಾಮುವು ಮ್ಯಾನೇಜರರು ಹೇಳಿದ ಮೂರು ತಿಂಗಳ ಅವಧಿಯು ಮುಗಿಯಿತಾದ ಕಾರಣ ಮುಂದಾದರೂ ತನಗೆ ಯೋಗ್ಯ ವೇತನ ದೊರಕೀತೆಂಬ ಅಭಿಲಾಷೆಯಿಂದಿದ್ದನು!

ರಾಮುವಿಗೆ ಮ್ಯಾನೇಜರರ ಕರೆ ಬಂದಿತು. ಬೇಗನೇ ಅವರ ಬಳಿ

ಹೋಗಿ ನಮ್ರತೆಯಿಂದ ನಿಂತಿದ್ದ ನವನು. ಮ್ಯಾನೇಜರರು 'ರಾಯರೇ, ನಿಮ್ಮನ್ನು ಅತಿ ಅರ್ಜಂಟಾಗಿ ನಾವು ತರಿಸಿದುದೇನೋ ಸರಿ. ಆದರೆ ಸದ್ಯ ಇಲ್ಲಿ ಯಾವ ಕೆಲಸವೂ ಖಾಲಿ ಇಲ್ಲದುದರಿಂದ ನೀವು ಸ್ವಲ್ಪ ಸಮಯದ ಮಟ್ಟಿಗೆ ಊರಿಗೆ ಹೋಗಬೇಕಾಗಿದೆ. ಮುಂದೆ ಅವಶ್ಯ ಬಿದ್ದಾಗ ನಿಮ್ಮನ್ನು ಕರೆಸುತ್ತೇನೆ.' ಎಂದರು.

ರಾಮುವು ಆಫೀಸಿನೊಳಗಿದ್ದನೇನೋ ನಿಜ. ಆದರೆ ಇಡೀ ಆಫೀಸೇ ಗರಗರನೆ ತಿರುಗುವಂತಾಗುತಿತ್ತು. ತನ್ನ ಅವಸ್ಥೆಯೇನು? ತಾನೇಕೆ ಮೊದಲಿನ ಉದ್ಯೋಗವನ್ನು ಬಿಟ್ಟುದು. ಯಾವ ಅಭಿಲಾಷೆಯಿಂದ ಮೂರು ತಿಂಗಳ ಧರ್ಮಾರ್ಥ ಕೆಲಸ ಮಾಡಿದೆನು. ಎಂದು ಮುಂತಾಗಿ ಯೋಚನೆಗಳುತ್ಪನ್ನವಾಗಿ ಅವನ ಮುಂದಿನ ಅವಸ್ಥೆಯ- ನಿರುದ್ಯೋಗ ಸ್ಥಿತಿಯ- ಚಿತ್ರವು ಕಣ್ಣೆದುರು ನಿಂತಂತಾಗಲು ನಿಲ್ಲಲಶಕ್ತಿಯುಂಟಾಗಿ ನೆಲದ ಮೇಲೆ ಬಿದ್ದು ಬಿಟ್ಟನು ಇದನ್ನು ನೋಡಿದ ಮ್ಯಾನೇಜರರು ಎಲ್ಲಿಗೋ ಹೋಗಿ ಬಿಟ್ಟರು- ಸಮೀಪದಲ್ಲಿದ್ದವರೆಲ್ಲರೂ ರಾಮುವನ್ನು ಹಿಡಿದೆತ್ತಿ ಉಪಚರಿಸಿ ಚೇತರಿಸುವಂತೆ ಮಾಡಿದರು. ಸಮಾಧಾನಪಡಿಸುವ ಯತ್ನವನ್ನಾರೂ ಮಾಡಲಿಲ್ಲ. ಏಕೆಂದರೆ ಅದಕ್ಕಾಗಿ ಹೊಸಶಬ್ದಗಳನ್ನು ಹೇಳುವಷ್ಟು ಹೃದಯಬಲವು ಎಲ್ಲರಿಗೂ ಇದ್ದಿಲ್ಲ. ಆದರೂ "ಸ್ವಾರ್ಥತೆಯ ಮರ್ಜಿ" ಎಂದು ವ್ಯಂಗಾರ್ಥವನ್ನು ಸೂಚಿಸುವ ವಾಕ್ಯವು ಎಲ್ಲಿಂದಲೋ ಕೇಳಿ ಬಂದಿತು.

ರಾಮುವೀಗ ನಿರುದ್ಯೋಗಿಯಾಗಿ ಊರಿಗೆ ಬರಲು ಮುಖವಿಲ್ಲದವನಾಗಿ ಎಲ್ಲೆಲ್ಲಿ ತಿರುಗುತ್ತಿದ್ದಾನೆ. ಧನಿಕರ ಮರ್ಜಿಯನ್ನರಿಯದ ರಾಮುವಿನಂಥ ಮೂರ್ಖರು ಆ ರೀತಿ ಅನ್ಯಾಯಕ್ಕೊಳಗಾಗುವುದು ಸ್ವಾಭಾವಿಕವಲ್ಲವೇ?

---

# ಈ ವಾರದ ಪಂಚಾಂಗ

ಬಹುಧಾನ್ಯ ಸಂ|ರದ ಪೌಷ ಶುಕ್ಲ-ಕೃಷ್ಣಪಕ್ಷ • ಧನು ೧೭ರಿಂದ ಧನು ೨೩ರ ವರೆಗೆ.
ದಕ್ಷಿಣಾಯನಂ ಹೇಮಂತರ್ತುಃ ಮಹಾನಕ್ಷತ್ರ-ಪೂರ್ವಾಷಾಢ ಜನವರಿ೧೯೩೯

## ಆರ್ಯಭಟ ವಾಕ್ಯಕರಣರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 1 | ೧೦ | ರ೧೪\| | ಭ೫೭\|\| | ಸಿ೩೯\|\| | ಗ೧೪\| | ೨೧\|\|\| | ೪೫\|\| | ವಿ೧ಕು೧೬ವಮಾ.ವ್ಯ.ಭರಣಿ೧೯೩೯† [†ನೇ ಇಸವಿ ಪ್ರಾರಂಭಃ |
| 2 | ೧೧ | ಚ೧೧\|\|\| | ಕೃ೫೫\|\|\| | ಸಾ೩೪ | ಭ೧೯\|\|\| | ೨೬\|\| | ೪೯\|\|\| | ವೃಷೇಚ೧೨ ಜ್ಯೆ೪ಬು೪೪ ಆ್ನ೨ಶು† [†೨೩ಸರ್ವೇಷಾವೇಕಾದಶೀಮನ್ವಾ. |
| 3 | ೧೨ | ಕು೮\| | ರೊ೫೩ | ಶು೨೭\|\|\| | ಬಾ೮\| | ೩೪ | ೪೫\|\| | ಸೌರಮುಕ್ಕೋಟಿ೧೨ ಪ್ರದೋಷಃ |
| 4 | ೧೩ | ಬು೩\|\|\| ಉ್ಪ೫೦ | ವೃ೦೫೦ | ಶ್ಲ೨೧ | ತೈ೩\|\|\| | ೬\|\| | ೨೯\| | ಪೂಷ೩ರ೧೪ ಮಿಥುನೇಚ೨೧\|\| |
| 5 | ೧೫ | ಗು೫೩\| | ಆರ್೪೬\| | ಬ್ರ೦೧೩\|\|\| | ಭ೨೬ | ೯\|\|\| | ೨೨\|\|\| | ○ ಪೂರ್ಣಿಮಾ |
| 6 | ೧ | ಶು೪೭\|\| | ಪು೪೨ | ಐ೬ ಉ್ಪ ೫೨\| | ಬಾ೨೦\|\| | ೧೪\| | ೩೬\|\| | ಕರ್ಕಟೇಚ೨೮ ವಿ೨ಕು೪೦ ಧನು§ [§ವೈಧೃತಿಃ ಮಾ. ನಿ.ಮಾಧವಃ |
| 7 | ೨ | ಶ೪೧\|\|\| | ಪು೩೮ | ವ್ಯ೫೦\|\| | ತೈ೧೪\|\| | \|\|\| | ೨೩\| | ಪೂಷಾ೪ರ೨೮ ಆ್ನ೩ಶು೨೮ |

## ಕೇತಕೀ ದೃಕ್ಸಿದ್ಧರೀತ್ಯಾ ನಿತ್ಯಪಂಚಾಂಗಂ

| ತಾ. | ತಿಥಿ | ವಾರ | ನಕ್ಷತ್ರ | ಯೋಗ | ಕರಣ | ವಿಷ | ಅಮೃತ | ವಿಶೇಷಾಂಶ |
|---|---|---|---|---|---|---|---|---|
| 1 | ೧೦ | ರ೨೩\|\|\| | ಅ್ವ೬\|\|\| | ಸಿ೪೭\| | ಗ೨೩\|\|\| | ಶೆ.೧ ವಿ ೩೦\|\| | ೩೪ | ವಿ೪ಕು೪೪ವಮಾ. ವ್ಯ. ಭ ಜನವರಿ† [†೧೯೩೯ |
| 2 | ೧೧ | ಚ೨೦\| | ಭ೫\|\| | ಸಾ೪೦\|\| | ಭ೨೦\| | ೩೪ | ೫೬\|\|\| | ವೃಷೇಚ೧೯\|\|\| ಸರ್ವೇಷಾಂ೧೧† [†ಮನ್ವಾದಿಃ |
| 3 | ೧೨ | ಕು೧೪\|\|\| | ಕೃ೨\|ಉ್ಪ೫೫ | ಶು೩೨\|\| | ಬಾ೧೮\|\|\| | ೩೯ | ಶೆ.\|\| ಅ೫೦ | ಜ್ಯೆ೪ಬು೩೬ಪ್ರದೋಷಃ |
| 4 | ೧೩ | ಬು೭\|\|\| ಉ್ಪ೫೧\|\|\| | ಮೃ೫೧ | ಶ್ಲ೨೩\| | ತೈ೭\|\|\| | ೮\|\| | ೩೧\| | ಪೂ.ಷಾ೩ ರ೧೨ ಮಿಥ:ನೆಚ೨೪§ [§೨ಶು೨೨ |
| 5 | ೧೫ | ಗು೫೦\|\|\| | ಆರ್೪೩\|\| | ಬ್ರ೧೩\| | ಭ೨೫\|\| | \|\|\| | ೨೧\|\|\| | ○ ಪೂರ್ಣಿಮಾ |
| 6 | ೧ | ಶು೪೦\|\| | ಪು೩೬ | ಐ೨\|\|ಉ್ಪ ೪೯ | ಬ೨೪\|\| | ೯\|\|\| ವಿ ೫೩\| | ೩೦\| | ಕಕರ್ಟಕೇಚ೨೨॥ಧನುಷೀಬುಧಃ೩೮ |
| 7 | ೨ | ಶ೧\| | ಪು೨೮\| | ವ್ಯ೪೦\|\| | ತೈ೫\|\|\| | ೫೬\| | ೧೪\| | ಪೂ.ಷಾ೪ರು೨೮ ವಿ೨ಕು೬ |

# ಈ ವಾರದಲ್ಲಿ ನಿಮ್ಮ ಭವಿಷ್ಯವು ಹೇಗಿದೆ?

( ತಾ. ೧-೧-'೩೯ರಿಂದ
ತಾ. ೭-೧-'೩೯ರ ವರೆಗೆ. )

**ಮೇಷ:—**

ನೈಸರ್ಗಿಕ ಗುಣವನ್ನನುಸರಿಸಿಕೊಂಡೋ ಎಂಬಂತೆ ಈ ವಾರದಲ್ಲಿ ನಿಮ್ಮ ರಾಶಿಗೆ ಶುಭಗ್ರಹರು ಶುಭಸ್ಥಾನವನ್ನೂ ಪಾಪಿಗ್ರಹರು ಅನಿಷ್ಟ ಸ್ಥಾನವನ್ನೂ ಆಕ್ರಮಿಸಿಕೊಂಡಿರುವರು. ಇದೊಂದು ಮಹತ್ವದ ಯೋಗದಂತೆ ಪರಿಣಮಿಸಿದೆ. ಆದಕಾರಣ ಸಜ್ಜನ ದುರ್ಜನ ಭೇದದಿಂದ ವಿಶೇಷವಾಗಿ ಇಷ್ಟಾನಿಷ್ಟಗಳು ಸಂಭವಿಸುವವು. ನಿರುದ್ಯೋಗದಲ್ಲಿದ್ದವರು ಏನಾದರೊಂದು ಉದ್ಯೋಗದಲ್ಲಿ ಪ್ರವೃತ್ತರಾಗುವರು. ಉದ್ಯೋಗಿಗಳು ತಮ್ಮ ಉದ್ಯೋಗದಲ್ಲಿ ತಕ್ಕ ಫಲಪ್ರಾಪ್ತಿಯನ್ನೂ ಸ್ವೀಕೃತ ಕಾರ್ಯದಲ್ಲಿ ಜಯವನ್ನೂ ಪಡೆಯುವರು. ಆದರೆ ಕಳತ್ರ ಸ್ಥಾನಕ್ಕೆ ಸ್ವಲ್ಪ ಹಾನಿಯ ಸಂಭವವಿದೆ. ಸ್ವಕೀಯ ಶರೀರವೂ ನಿರಾಲಸ್ಯದಿಂದಿರಲಾರದು. ಧನ ವಿಷಯಕವಾಗಿ ಕೆಲವರಲ್ಲಿ ಕಲಹವಾದೀತು. ತಾ. ೨, ೩, ೪ ಮತ್ತು ೭ ಈ ದಿನಗಳಲ್ಲಿ ವಿಶೇಷ ಧನ ವ್ಯಯ ಮನಸ್ತಾಪಗಳುಂಟಾಗುವವು.

**ವೃಷಭ:—**

ಹಣದಅಡಚಣೆಗಳೆಲ್ಲವೂ ಒಮ್ಮೆ ತೀರಿಕೊಂಡವು ಎಂದು ಹೇಳಬಹುದು. ದಾಯಾದಿಗಳಲ್ಲಿರತಕ್ಕ ಯಾ ಕುಟುಂಬದಲ್ಲಿನ ಮನಸ್ತಾಪಗಳು ನಿವೃತ್ತಿಹೊಂದಿ ಅನ್ಯೋನ್ಯ ಐಕ್ಯ ಭಾವದಿಂದ ವ್ಯವಹರಿಸುವಿರಿ. ಆದರೂ ನಿಮ್ಮ ಮನಸ್ಸು ನಿಶ್ಚಿಂತವಾಗುವಂತಿಲ್ಲ. ಕಾರಣ ಸ್ವಸ್ತ್ರೀಯಳು ಮಾತ್ರವಲ್ಲ, ಸಾಮಾನ್ಯ ಸ್ತ್ರೀ ವರ್ಗದವರ ವಕ್ರ ದೃಷ್ಟಿಯೂ ನಿಮ್ಮ ಮೇಲೆ ಬಿದ್ದಿರುವುದು. ಅವರೇನೋ ಅಬಲೆಯರೆಂದು ನೀವು ತಾತ್ಸಾರ ಮಾಡುವಿರಿ. ಆದರೆ ಸ್ವಾಭಾವಿಕವಾಗಿ ಅವರು ಅಬಲೆಯರಾದರೂ ನಿಮ್ಮ ಪಾಲಿಗೆ ಸಬಲೆಯರೇ ಆಗಿರುವರು. ಇವರಿಂದ ಪೀಡೆಯೂ ಅನಿಷ್ಟಗಳೂ ನಿಮಗೆ ತಪ್ಪುವಂತಿಲ್ಲ. ಆಂತರಿಕ ಭಯವು ನಿಮ್ಮಲ್ಲಿ ನೆಲೆಯಾಗಿರುವುದು. ತಾ. ೧, ೫, ೬ ಈ ದಿನಗಳು ಆರೋಗ್ಯಕ್ಕೂ, ಧನಮಾನಗಳಿಗೂ ಹಾನಿಕಾರಕವಾಗಿರುವುವು.

**ಮಿಥುನ:—**

ನೀವು ಒಳ್ಳೆಯ ವ್ಯವಹಾರ ಕುಶಲರಿರುವದರಿಂದ ನೀವು ಸ್ವಯಂಅಶಕ್ತರಿದ್ದರೂ ನಿಮ್ಮ ಕಾರ್ಯಗಳನ್ನು ಬೇರೆಯುವರ ಮೂಲಕ ಉಪಾಯದಿಂದ ಪೂರ್ತಿಗೊಳಿಸುವಿರಿ. ಗೃಹೋಪಕರಣಗಳಾದ ಪಶುಪಕ್ಷಿ, ಧನಧಾನ್ಯಗಳ ಭಾಗದಲ್ಲಿ ಏನೊಂದೂ ಕೊರತೆಯುಂಟಾಗದು. ಆದರೆ ಇತರ ಅನಿಷ್ಟಗ್ರಹರ ಬಲದಿಂದಾಗಿ ನಿಮ್ಮ ಮನಸ್ಸೇ ಕೆಟ್ಟಿರುವುದು. ಸದಾ "ಮುರಾರೇ: ತೃತೀಯ: ಪಂಥಾ:" ಎಂದಂತೆ ಎಲ್ಲರಿಗೂ ಒಂದು ಮಾರ್ಗವಾದರೆ ಅಂದರೆ ಹಲವರ ಮತವೊಂದಾಗಿದ್ದರೆ ನಿಮ್ಮ ಮತವು ಇನ್ನೊಂದಾಗಿರುವುದು. ಈದಾವ ದೋಷದಿಂದಾಗಿ ಹಲವರಿಗೆ ನಿಮ್ಮ ಮೇಲೆ ತಿರಸ್ಕಾರ ಬುದ್ಧಿ ಹುಟ್ಟುವುದು. ನಿಮ್ಮ ಕಾರ್ಯಕ್ಕೆ ಅನೇಕರು ಕಲ್ಲೆಸೆಯುವರು. ಅಂತೂ ಆಯಕ್ಕಿಂತ ಹೆಚ್ಚಾಗಿ ವ್ಯಯವಾಗಲಾರದು. ತಾ. ೧, ೫, ೬ ಈ ದಿನಗಳು ಇತರ ದಿನಗಳಿಗಿಂತ ಉತ್ತಮವಿರುವುದರಿಂದ ಮಿತ್ರರ ಭೇಟಿ, ಮೃಷ್ಟಾನ್ನ ಭೋಜನ, ಇತ್ಯಾದಿಗಳಿಂದ ಸಂತೋಷದಿಂದ ಕಾಲ ಕಳೆಯುವಿರಿ.

**ಕರ್ಕಾಟಕ:—**

"ವಿದ್ಯಾಧನಂ ಸರ್ವಧನ ಪ್ರಧಾನಂ" ಎಂದು ಕವಿಗಳು ಹಲವು ಬಗೆಯಿಂದ ವರ್ಣಿಸಿರುವರು. ಅಂದರೆ ಎಲ್ಲಾ ಧನಗಳಿಗಿಂತಲೂ ವಿದ್ಯಾರೂಪವಾದ ಧನವು ಅತ್ಯುತ್ಕೃಷ್ಟವಾದುದು. ಯಾಕಂದರೆ ಈ ಧನವನ್ನು ಉಪಯೋಗಿಸಿ ಖರ್ಚುಮಾಡಿದಷ್ಟು ಹೆಚ್ಚೆಚ್ಚಾಗಿ ವೃದ್ಧಿಗೊಳ್ಳುವುದು. ಕಳ್ಳಕಾಕರ ಭಯವು ಇದಕ್ಕಿಲ್ಲ. ಹಣವು ಇದಕ್ಕೆ ವಿಪರೀತವಾದ ಗುಣಗಳುಳ್ಳದ್ದು. ಆದರೂ ಕಾಲಚಕ್ರದ ಗತಿಯಿಂದಾಗಿ ಮನುಷ್ಯನೆಂಥವನೇ ಇರಲಿ. ಬೇಕಾದಷ್ಟು ಧನವಿದ್ದರೆ ಆತನೇ ಸರ್ವತ್ರ ಅಗ್ರಪೂಜಾರ್ಹನಾಗುವನು. ಈ ಧನದ ಮಹಿಮೆಯನ್ನು ನೀವು ಹಲವೊಮ್ಮೆ ಕಂಡು ಅದಕ್ಕಾಗಿ ಹಾತೊರೆಯುವಿರಿ. ಅದಕ್ಕಾಗಿ ಅನೇಕ ಉದ್ಯಮಗಳಲ್ಲಿ

ಪ್ರವರ್ತಿಸುವಿರಿ. ಆದರೆ ಪ್ರಕೃತದ ಪರಿಸ್ಥಿತಿಯಲ್ಲಿ ನಿಮಗದು ಬಹಳ ದುರ್ಲಭವೇ. ನಿಮಗೆ ಸಹಕಾರಿಗಳಾಗಿ ಅನೇಕ ಬಂಧುಗಳು ಮಿತ್ರರು ಇರುವರು. ಆದರೆ ಮಿತ್ರ ಜನರೇ ಅಂತತಃ ನಿಮಗೆ ಪ್ರತಿಕೂಲರಾಗಿ ವರ್ತಿಸುವರು. ಅದಕ್ಕನುಸಾರವಾಗಿ ದೈವಾನುಗ್ರಹವೂ ಪ್ರಕೃತ ನಿಮಗಿಲ್ಲವು. ವಾರದ ಅಂತ್ಯಾರ್ಧವು ವಿಶೇಷ ಹಾನಿಕರವಿದೆ.

**ಸಿಂಹ:—**

ಈ ವಾರವು ನಿಮಗೆ ಆರೋಗ್ಯ ವಿಷಯದಲ್ಲಿ ಸ್ವಲ್ಪ ಹಾನಿದಾಯಕವಾಗಿದೆ. ಈ ಸಲುವಾಗಿ ಪರಾಶ್ರಯವನ್ನಪೇಕ್ಷಿಸುವಿರಿ. ಇತರ ಭಾಗಗಳಲ್ಲಿ ನಿಮಗೆ ಉತ್ತಮವಿದೆ. ಅಂದರೆ, ಸಾಂಪತ್ತಿಕಸ್ಥಿತಿಯು ಬಹಳ ಸುಧಾರಣೆ ಹೊಂದಿರುವುದು. ಮನೆಯಲ್ಲಿ ಯಾವ ವಸ್ತುವಿಗೂ ಕೊರತೆಯಿಲ್ಲದಿರುವುದರಿಂದ ಸಾಂಸಾರಿಕ ತಾಪತ್ರಯವೇ ನಿಮಗಿಲ್ಲವು. ವ್ಯಾಪಾರಾದಿ ಉದ್ಯೋಗದಲ್ಲಿ ಪ್ರವೃತ್ತರಾದವರಿಗೆ ಅವರ ಅಪೇಕ್ಷೆಯನ್ನತಿಕ್ರಮಿಸಿ ಕಾರ್ಯವಾಗುವುದು. ಧನ ಜನರ ಬೆಂಬಲವೂ ಸ್ವಯಂ ವಿವೇಕ ಶಕ್ತಿಯೂ ಇರುವುದರಿಂದ ಎಲ್ಲಾ ಕಾರ್ಯಗಳಲ್ಲೂ ಜಯಶೀಲರಾಗುವಿರಿ. ಒಳ್ಳೆಯ ಕೀರ್ತಿಯನ್ನು ಗಳಿಸುವಿರಿ. ತಾ. ೨ರಿಂದ ೬ರ ವರೆಗಿನ ದಿನಗಳು ಅನುಕೂಲಗಳಾಗಿರುವುದರಿಂದ ಇಷ್ಟಸಿದ್ಧಿ, ನಾನಾ ವಿಧ ಲಾಭಗಳುಂಟಾಗುವವು.

**ಕನ್ಯಾ:—**

ಭೃತ್ಯಾಚಾರ್ಯನಾದ ಶುಕ್ರನೊಬ್ಬನು ನಿಮಗೆ ಅನುಕೂಲನಾಗಿದ್ದರೂ ಇತರರೆಲ್ಲರೂ ಪ್ರತಿಕೂಲರಾಗಿರುವುದರಿಂದ ನಿಮಗೀ ವಾರವು ಹಿತಕರವಾಗಿಲ್ಲವು. ಕೆಲವು ಕಾರ್ಯಗಳಲ್ಲಿ ನಿಮ್ಮ ಮನಸ್ಸಾಕ್ಷಿಗೇ ವಿರೋಧವಾಗಿ ವರ್ತಿಸಿ ಕಾರ್ಯವನ್ನು ನಿಮ್ಮಂತೆ ಪೂರೈಸಿಕೊಂಡರೂ ರಾಜಭಯಕ್ಕೂ ಶತ್ರುಭಯಕ್ಕೂ ಪಾತ್ರರಾಗುವಿರಿ. ಪಿತ್ಥವಿಕಾರದಿಂದಾಗಿ ಕೆಲವು ಕಾಹಿಲೆಗಳೂ ದುಃಸ್ವಪ್ನಗಳೂ ಬೀಳುವುವು. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವೆಂಬಂತಾಗುವುದು. ಕೆಲವು ಭಾಗಗಳಲ್ಲಿ ವಿರೋಧಿಗಳಿಂದಾದ ಅಪಕೃತಿಯು ಮನೋವ್ಯಥೆಯನ್ನು ವೃದ್ಧಿಗೊಳಿಸುವದು. ವ್ಯರ್ಥವಾಗಿ ಅಲೆದಾಡುವ ಪ್ರಕರಣವು ಬರುವುದು. ಅದರಲ್ಲೂ ತಾ. ೧ ರಿಂದ ೪ರ ವರೆಗೆ ಆಯಾಸ, ಭಯ, ಅನಿಷ್ಟಾದಿಗಳು ಹೆಚ್ಚಾಗಿ ಪೀಡಿಸುವವು.

**ತುಲಾ:—**

ಅಕಸ್ಮಾತ್ತಾಗಿ ಶರೀರಕ್ಕೆ ಅವಘಡಗಳು ಸಂಭವಿಸಬಹುದು. ಈ ಭಾಗದಲ್ಲಿ ಹೆಚ್ಚಿನ ಜಾಗರೂಕರಾಗಿರತಕ್ಕದ್ದು. ಇತರ ವಿಷಯಗಳೆಲ್ಲವೂ ನಿಮ್ಮ ಇಷ್ಟದಂತಲೇ ಕೊನೆಗಾಣುವುವು. ಅದೃಷ್ಟವು ಚೆನ್ನಾಗಿದೆಯೆಂದು ಕೈಕಟ್ಟಿ ನಿರುದ್ಯೋಗಿಯಾಗಿ ಸುಮ್ಮನೆ ಕುಳಿತರೆ ಕಾರ್ಯಸಾಗದು. ಯಾಕೆಂದರೆ ರಥದ ಎರಡು ಚಕ್ರದಂತಿರುವ ಅದೃಷ್ಟ ಪ್ರಯತ್ನಗಳಲ್ಲಿ ಅದೃಷ್ಟರೂಪವಾದ ಒಂದು ಚಕ್ರ ತಿರುಗಿದರೆ ರಥವು ನಿಂತಲ್ಲೇ ತಿರುಗುವುದೇ ಹೊರತು ಮುಂದರಿಯಲಾರದು. ಇದ

ರಂತೆಯೇ ನೀವು ಪ್ರಯತ್ನಮಾಡಿದಲ್ಲಿ ನಿಮಗಸಾಧ್ಯವಾದ ಕಾರ್ಯವಾವುದೂ ಇಲ್ಲವೆನ್ನಬಹುದು. ಅಲ್ಲದೆ ಯಾವ ತರದ ಚಿಂತೆಯೂ ನಿಮ್ಮನ್ನಾವರಿಸಿಲ್ಲವು. ನಿರುದ್ಯೋಗಿಗಳು ತಕ್ಕ ಶ್ರಮವಹಿಸಿದಲ್ಲಿ ಒಂದು ಉದ್ಯೋಗದಲ್ಲಿ ಪ್ರವೇಶಿಸುವರು—ಈ ವಾರದ ಆದ್ಯಂತ ದಿನಗಳು ವಿಶೇಷ ಅನುಕೂಲಗಳಾಗಿರುವುವು.

**ವೃಶ್ಚಿಕ:** –

ಕಾಮುಕರ ಭಾಗಕ್ಕೆ ಈ ವಾರವು ಅವರ ಮನಸ್ತೃಪ್ತಿ ವಿಷಯಕ್ಕೆ ಮಾತ್ರ ಕಾರಣವಾದೀತೇ ಹೊರತು ಇತರ ಯಾವ ಭಾಗದಲ್ಲೂ ಇತರರಿಗೂ ಕೂಡ ಹಿತಕರವಾಗಿಲ್ಲವು. ಆಪ್ತ ಬಂಧುಗಳ ಮಾಯಾಜಾಲಕ್ಕೆ ಸಿಲುಕಿ ಬಿದ್ದು ವಿಶೇಷವಾದ ಚಿಂತೆಗೀಡಾಗುವಿರಿ. ಆಗ "ಅಟ್ಟಮೇಲೆ ಒಲೆಯುರಿಯಿತು" ಎಂಬ ಗಾದೆಯನ್ನು ಸ್ಮರಿಸುವಿರಿ. ದೇಹಾಲಸ್ಯವು ಅಧಿಕವಾಗುವುದರಿಂದ ಪ್ರಕೃತಿ ಮತ್ತು ಪ್ರಾಪಂಚಿಕ ಸುಖಗಳು ಸ್ವಪ್ನದಲ್ಲೇ ಸರಿ. ಆರ್ಥಿಕ ಮುಗ್ಗಟ್ಟು ಕ್ಷಣಕ್ಷಣಕ್ಕೂ ವೃದ್ಧಿ ಹೊಂದುತ್ತಾ ಬರುತ್ತಿರುವುದು. ಜನರಿಗೆ ಮೋರೆ ತೋರಲು ಕೂಡ ನಾಚುವಿರಿ. ಜನರಲ್ಲಿನ ಕಲಹವು ದಿನೇ ದಿನೇ ಹೆಚ್ಚುವುದು. ಆದರೂ ವಾರದ ಆದ್ಯರ್ಧಭಾಗದಲ್ಲಿ ಈ ದೋಷಗಳು ಹೆಚ್ಚಿನ ಪೀಡೆ ಕೊಡಲಾರವು.

**ಧನು:**—

ಸಂಪಾದಿಸುವಿರಿ, ಖರ್ಚುಮಾಡುವಿರಿ. ಕಟ್ಟಿಡುವ ಬುದ್ಧಿಯು ನಿಮ್ಮಲ್ಲಿಲ್ಲ. ಒಂದು ವೇಳೆ ಕಟ್ಟಿಡಲೆಣಿಸಿದರೂ ಪ್ರಕೃತದ ಪರಿಸ್ಥಿತಿಯಲ್ಲದು ಸಾಧ್ಯವಾಗುವಂತಿಲ್ಲ. ನಾಳಿನ ಕಥೆ ನಾರಾಯಣ ಬಲ್ಲ ಎಂಬಂತಿದೆ ಈಗಿನ ನಿಮ್ಮ ಪರಿಸ್ಥಿತಿ. ಜನರಿಂದ ಮಾನ ಸನ್ಮಾನಗಳನ್ನು ಪಡೆಯುವಿರಿ. ಯಾವ ಕೆಲಸಮಾಡಲೂ ತಕ್ಕ ಬೌದ್ಧಿಕ ಶಕ್ತಿಯಿರುವುದು. ಆದರೂ ನೀವೆಣಿಸಿದ ಕಾರ್ಯಗಳಿಗೆ ಆರಂಭಕ್ಕಿಂತ ಮೊದಲೇ ವಿಘ್ನಗಳು ತಯಾರಾಗಿರುವುವು. ಸಾಂಸಾರಿಕ ಸುಖವಾಗಲಿ ಮಾನಸಿಕ ಸುಖವಾಗಲಿ ಸ್ವಲ್ಪವೂ ಇಲ್ಲವು. ಯಾವಾಗಲೂ ಒಂದಲ್ಲೊಂದು ಚಿಂತೆಯು ಇದ್ದೇ ಇದೆ. ಕಾರ್ಯ ನಿಮಿತ್ತವಾಗಿ ಪ್ರಯಾಣ ಮಾಡುವ ಪ್ರಸಂಗವೂ ಬರುವುದು. ಒಟ್ಟಾರೆ ಹೇಳುವದಾದರೆ ಮನಸ್ಸಿಗೆ ಒಂದು ಕ್ಷಣವೂ ನೆಮ್ಮದಿಯೆಂಬುದಿಲ್ಲವು. ತಾ. ೨ರಿಂದ ೬ರ ವರೆಗೆ ವಿಶೇಷ ಹಾನಿಗಳಾಗವು.

**ಮಕರ:**—

ದೈವ ದೇವರುಗಳಲ್ಲಿ ಭಕ್ತಿಯನ್ನಿಡಿರಿ. ಗುರುಹಿರಿಯರಲ್ಲಿ ಪೂಜ್ಯಭಾವವನ್ನಿಡಿರಿ. ಕರ್ಮದಲ್ಲಿ ಶ್ರದ್ಧಾವಂತರಾಗಿರಿ. ಮನಸ್ಸಾಕ್ಷಿಗೆ ಸರಿಯಾಗಿ ದೇವರು ಮೆಚ್ಚುವ ರೀತಿಯಲ್ಲಿ ಕೆಲಸ ಮಾಡಿರಿ. ಹೀಗೆ ವರ್ತಿಸಿದ್ದಲ್ಲಿ ನಿಮಗಾವ ಭಾಗದಲ್ಲೂ ಕೊರತೆಯುಂಟಾಗದು. ಇಷ್ಟಾರ್ಥಗಳು ಶೀಘ್ರದಲ್ಲಿಯೇ ನೆರವೇರುವುವು. ಯಾವುದೇ ಉದ್ಯೋಗಾವಲಂಬಿಗೂ ಕೂಡ ಅದೇ ಶ್ರೇಷ್ಠವೆನಿಸಿಕಂಡೀತು. ನಿಷ್ಕಲ್ಮಷ ಹೃದಯರಾದ ಆಪ್ತಜನರಿಂದ ಬಹಳ ಉಪಕಾರವನ್ನು ಹೊಂದುವಿರಿ. ಶಾರೀರಕ, ಮಾನಸಿಕ, ಸಾಂಸಾರಿಕ ಈ ಎಲ್ಲಾ ಭಾಗಗಳಲ್ಲೂ ಸುಖಶಾಂತಿಯಿಹುದು. ವಿರೋಧಿಗಳೂ ಕೂಡ ನಿಮಗೆ ಶರಣಾಗತರಾಗುವರು. ಇನ್ನು ಹೆಚ್ಚಿಗೆ ಹೇಳುವುದಿಲ್ಲ. ಅಂತೂ ನಿಮ್ಮ ಇಷ್ಟದಂತೆಯೇ ಸರ್ವವೂ ಫಲಿಸುವುದು. ತಾ. ೫, ೬, ೭, ಬಹಳ ಉತ್ತಮವಿಹುದು.

**ಕುಂಭ:**—

"ಮೌನಂ ಸರ್ವಾರ್ಥ ಸಾಧನಂ" ಅಂದರೆ ತಾಟಸ್ಥ್ಯ ಭಾವವು ಗೌರವಕ್ಕೂ, ಮರ್ಯಾದೆಗೂ,

ಕಾರ್ಯಸಾಧನೆಗೂ ಎಲ್ಲವಕ್ಕೂ ಸಾಧಕವಾದುದು ಎಂದು. ಅದಕ್ಕಾಗಿಯೇ ಆಗಾಗ ಮಹಾತ್ಮಾಜೀಯವರೂ ಕೂಡ ಮೌನವ್ರತವನ್ನಾಚರಿಸುವುದಲ್ಲವೆ? ಪ್ರಕೃತ ನಿಮ್ಮ ಭಾಗಕ್ಕೆ ಇದು ಬಹಳ ಉಪಕಾರಿಯಾದೀತು. ನೀವು ಮಿತಭಾಷಿಯಾಗಿದ್ದರೂ ನಿಮಗೆ ಕಲಹವು ತಪ್ಪದೆಂಬಲ್ಲಿ ಮೌನವೇ ಅದಕ್ಕೆ ಸರಿಯಾದ ಉಪಾಯವಷ್ಟೆ. ನಿಮಗೀ ವಾರದಲ್ಲಿ ನಿಮ್ಮ ಉದ್ಯೋಗದಲ್ಲಿಯಾಗಲಿ, ಕಾರ್ಯದಲ್ಲಿಯಾಗಲಿ ಏನೂ ತೊಡಕಗಳು ಸಂಭವಿಸವು. ದುಡಿದ ಹಣವೆಲ್ಲವೂ ಸ್ವಕೀಯಕ್ಕಾಗಿಯೇ ವಿನಿಯೋಗವಾಗುವದು. ಪರರ ಹಿತಕ್ಕೆಂದು ನೀವು ಕಾರ್ಯ ಮಾಡಿದರೂ ಅವರದನ್ನು ಅಪಕಾರವೆಂದೆಣಿಸಿ ನಿಮ್ಮ ಮೇಲೆ ಮುನಿದು ಬೀಳುವರು. ಚಿಂತೆಯು ಯಾವಾಗಲೂ ತಪ್ಪದು. ತಾ. ೩ ರಿಂದ ೬ರ ವರೆಗೆ ಜಾಗ್ರತೆ ತಪ್ಪಿರಬೇಡಿ. ಹಿತಚಿಂತಕರೆಂಬ ಗೋಮುಖವ್ಯಾಘ್ರರ ಬಾಯಿಗೆ ತುತ್ತಾಗುವಿರಿ.

**ಮೀನ:—**

ನಿಮಗೀ ವಾರದಲ್ಲಿ ಅನಿಷ್ಟಗಳೇ ಹೆಚ್ಚಾಗಿ ಕಂಡು ಬರುತ್ತಿವೆ. ಸ್ವೀಕೃತ ಕಾರ್ಯಗಳಿಗೆ ವಿಘ್ನವು ಮುಗಿಯಿತೆಂದಿಲ್ಲ. ವೈರಿಗಳಿಂದ ಮಾನಹಾನಿಯೂ ಸಂಭವಿಸೀತು. ಅಕಸ್ಮಾತ್ತಾಗಿ ಊರು ಬಿಡಬೇಕಾಗುವ ಸಂದರ್ಭ ಬಂದು ಮಾರ್ಗದಲ್ಲಿ ನಾನಾ ತರದ ಕಷ್ಟನಷ್ಟಗಳನ್ನನುಭವಿಸುವಿರಿ. ಆಯಕ್ಕಿಂತ ವ್ಯಯವು ಇಮ್ಮಡಿಯಾಗಿ ಯಾವಾಗಲೂ ಹಣದ ಅಡಚಣೆ ತಪ್ಪುವಂತಿಲ್ಲ. ನಿಮ್ಮ ಬುದ್ಧಿಪೂರ್ವಕವಾಗಿಯಾಗಲಿ, ಯಾ ಅಂತೆಯೇ ಆಗಲಿ ಧರ್ಮಕರ್ಮಗಳೇನೋ ಜರಗುವವು. ಇದರಿಂದಾಗಿ ನಿಮ್ಮ ಕೆಲವು ಕಾರ್ಯಗಳು ಕೊನೆಗೊಂಡು ತತ್ಫಲ ರೂಪವಾಗಿ ಧನ ವಸನಾದಿಗಳು ದೊರೆಯುವವು. ತಾ. ೨, ೩, ೪, ಈ ದಿನಗಳಲ್ಲಿ ವನಿತಾಸುಖ, ಧನಾಗಮಗಳು ತೃಪ್ತಿಕರವಾಗಿರುವುವು.

**ಬಾಲಭಾಸ್ಕರ.**

# ಪುಸ್ತಕಾವಲೋಕನ

## ಸೂಕ್ತಿಸುಧೆ

(ಸರ್ವೇಶಪದಗಳು). ಬರೆದವರು 'ರಾಜಭಕ್ತಿ ಮುಕ್ತಾವಳಿ'ಯ ಕರ್ತೃಗಳಾದ ಶ್ರೀ|| ಬಿ. ಶ್ರೀಕಂಠಯ್ಯನವರು. ಚಿಕ್ಕಂದಿನಿಂದ ಇವರ ಗೆಳೆಯರಾದ ಶ್ರೀ ಬಿ. ಎಂ. ಶ್ರೀಕಂಠಯ್ಯನವರು 'ಹೀಗೇ ಸರಿ ಎಂದಲ್ಲ, ಕನ್ನಡಕ್ಕಾಗಿ ದುಡಿಯುತ್ತಿರುವರಲ್ಲಾ ಎಂದು' ಅಂಥ ದುಡುಮೆಯ ಫಲಗಳಲ್ಲೊಂದಾದ ಈ 'ಸೂಕ್ತಿಸುಧೆ' ಗೊಂದು ಚಿಕ್ಕ ಮುನ್ನುಡಿಯನ್ನು ಬರೆದುಕೊಟ್ಟಿದ್ದಾರೆ. ಪುಸ್ತಕದ ಹದಿಮೂರು ಪ್ರಕರಣಗಳಲ್ಲಿ ಒಟ್ಟು ಇರುವ ೩೨೦ ತ್ರಿಪದಿಗಳಿಂದ ನಾಲ್ಕನ್ನೆತ್ತಿ 'ಈ ಪದ್ಯಗಳು ಮುತ್ತುಗಳಂತಿಲ್ಲವೆ? ಯಾರ ಕೊರಳಿಗೆ ಅಂದವಾಗಲಾರವು!' ಎಂದು ತೋರಿಸಿಕೊಟ್ಟಿದ್ದಾರೆ. ತಪ್ಪುಗಳೇನಿದ್ದರೂ ತಿದ್ದಿಕೊಡಬೇಕಾಗಿ ಗ್ರಂಥಕರ್ತರು ಪ್ರಾಜ್ಞರನ್ನು ಪ್ರಾರ್ಥಿಸಿಕೊಂಡು ದರ ವಿಷಯವಾಗಿ 'ಏನಿದ್ದರೂ, ಸುಧಾರಣೆ ಮುಂದಿನ ಮುದ್ರಣಕ್ಕಷ್ಟೆ?' ಎಂದಿದ್ದಾರೆ. 'ಸರ್ವಜ್ಞನು ನಮ್ಮಲ್ಲೊಂದು ರತ್ನ; ಅವನ ವೀಣೆಯನ್ನು ಮೀಟುವ ಶಿಷ್ಯರೂಜನರಿಗೆ ಪ್ರಿಯರಾದಾರೆಂದು ಹಾರೈಸುತ್ತೇನೆ' ಎಂದು ಮುನ್ನುಡಿಯನ್ನು ಪೂರೈಸಿದ್ದಾರೆ. ಅಂತೂ ಹೇಳಬೇಕಾದುದನ್ನು ಹೇಳುವ ಹಾಗೇ ಹೇಳಿದ್ದಾರೆ. ಆದರೆ ಶ್ರೀ|| ಸಿ. ಗುರುಶಾಂತ ಶಾಸ್ತ್ರಿ, ಆಸ್ಥಾನ ಮಹಾವಿದ್ವಾನ್, ಇವರು 'ಮುನ್ನೂರು ವರ್ಷಗಳ ಹಿಂದೆ ನಮ್ಮ ನಾಡನ್ನು ಪವಿತ್ರಗೈದ ಮಹಾನುಭಾವನಾದ ಸರ್ವಜ್ಞ ಕವಿಯ ದಾರಿಯಲ್ಲಿ ಯಾರೂ ಮೂರ ಹೋಗಿರಲಿಲ್ಲ. ಈಗ ಈ ಲೇಖಕರು ಅಲ್ಲಿ ನುಗ್ಗಿ ಸರ್ವಜ್ಞಕವಿಯ ದ್ವಿತೀಯ ಸ್ಥಾನವನ್ನು ಪಡೆದರೆಂದು ಹೇಳಲು ಅತಿಶಯೋಕ್ತಿಯೆನಿಸದು' ಎಂದು 'ಒಳ್ನುಡಿ' ಕೊಟ್ಟುದರಲ್ಲಿ ಅತಿಶಯೋಕ್ತಿ ಮಿತಿಮೀರಿಹೋಗಿದೆ. ಆಸ್ಥಾನ ಮಹಾವಿದ್ವಾನರ ಶೈಲಿಯೇ ಹಾಗೆಯೋ ಏನೊ! ಅಂತೂ ಹಲವು ಪದ್ಯಗಳು ತಮ್ಮ ಸರಳ ಶೈಲಿ, ಪ್ರಾಸದ ಇಂಪು, ವಿಷಯದ ಸ್ವಾರಸ್ಯ ಇವುಗಳಿಂದ ಓದುಗರ ಬಗೆಮುಟ್ಟುವಂತಿವೆ. ಕೆಲವು ಮತ್ತೊಮ್ಮೆ ಓದೋಣ ಕೇಳೋಣ ಹೇಳೋಣ ಎಂಬ ಹಾಗೂ ಇವೆ. ಕೆಲವನ್ನು ಬಿಟ್ಟಿದ್ದರೆ ಕೃತಿಯ ಸವಿಯು ಅಲ್ಲಲ್ಲಿ ಸಪ್ಪೆಯಾಗದೆ ಮತ್ತೂ ಸವಿಗಾಣುತ್ತಿತ್ತು. ವಾಚನೀಯವಾದ ಪುಸ್ತಕ. ಬೆಲೆ ೬ ಆಣೆ.

**ದೊರೆಯುವ ಸ್ಥಳ:—**

ಸ್ಟೂಡೆಂಟ್ಸ್ ಸೈಕಲ್ &
ಮ್ಯೂಸಿಕಲ್ ಸ್ಟೋರ್ಸ್,
ಲ್ಯಾನ್ಸ್‌ಡೌನ್ ಬಜಾರ್ಸ್,
**ಮೈಸೂರು.**

## ಸ್ವೀಕಾರ

### ಸಾಮ್ಯವಾದ

ಲೇಖಕರು:—ಶ್ರೀ ಕುಲಕರ್ಣಿ ರಾಮಚಂದ್ರರಾವ್, ಬಿ. ಎ.,
ಮತ್ತು
ಬುರುಳಿ ಬಿಂದು ಮಾಧವ.

ಇದು ಧಾರವಾಡದ ಮಿಂಚಿನ ಬಳ್ಳಿಯ ನಾಲ್ಕನೆ ಪುಡಿ. ಕ್ರಯ ರೂ. ೧. ಸಾಮ್ಯವಾದದ ಮೇಲೆ ಕರ್ನಾಟಕದಲ್ಲಿ ಇದು ಅತ್ಯುತ್ತಮ ಗ್ರಂಥ. ವಿಮರ್ಶೆ ಯಥಾವಕಾಶ.

### ಸಂಧ್ಯಾರಾಗ

ಇದು ಧಾರವಾಡದ ಮನೋಹರ ಗ್ರಂಥಮಾಲೆಯ ೩೧ನೇ ಕುಸುಮ. ಇದೊಂದು ಸ್ವತಂತ್ರ ಸಾಮಾಜಿಕ ಕಾದಂಬರಿ. ಬರೆದವರು ಕರ್ನಾಟಕದ ಸುಪ್ರಸಿದ್ಧ ಲೇಖಕರಾದ. ಅ. ನ. ಕೃಷ್ಣರಾಯರು. ಕ್ರಯ. ರೂ. ೧-೦-೦. ವಿಮರ್ಶೆ ಯಥಾವಕಾಶ.

### ಪ್ರೇಮಾಹುತಿ

ಇದು ಮನೋಹರ ಗ್ರಂಥಮಾಲೆಯ ೩೨ ಮತ್ತು ೩೩ನೇ ಕುಸುಮ. ಮಹರ್ಷಿ ಟಾಲ್‌ಸ್ಟಾಯಿಯವರ ಎನ್ನಾಕೆರಿನಿನಾ ಎಂಬ ಕಾದಂಬರಿಯ ಅನುವಾದ ಅನುವಾದಕರು, ಗುರುರಾಜ ಭೀ ಜೋಶಿ. ಎಂ. ಎ. ಬಿ. ಟಿ. ಕ್ರಯ ೧-೮-೦. ವಿಮರ್ಶೆ ಯಥಾವಕಾಶ.



ಅಂತರಂಗದ
ನಂಬ್ರ ೩ನೇ ಸ್ಪರ್ಧೆಗೆ
ಉತ್ತರಗಳನ್ನು ಕಳುಹಿಸತಕ್ಕವರು
ಈ ಕೂಪನುಗಳಲ್ಲಿ ಬರೆದು
ಕಳುಹಿಸತಕ್ಕದ್ದು.

[ಕವರಿನ ೩ನೇ ಪುಟ ನೋಡಿರಿ.]

ಗೆಳೆಯರ ತಂಡದ
ಮೆಂಬರರಾಗಲು
ಮರೆಯಬೇಡಿರಿ.

## ಅಂತರಂಗ ಸ್ಪರ್ಧೆ—ನಂ. ೩

ಸ್ಪರ್ಧೆಯ ಉತ್ತರಗಳನ್ನು ಈ ಕೂಪನಿನಲ್ಲಿಯೇ ಬರೆದು ಕಳುಹಿಸಬೇಕು.

ಹೆಸರು . . . . . . . . . . . . . . . . . . . . . . . .

ವಿಳಾಸ . . . . . . . . . . . . . . . . . . . . . . . .

. . . . . . . . . . . . . . . . . . . . . .

ಸಹಿ . . . . . . . . . . . . . . . . . . . . . . . .

ಉತ್ತರಗಳ ಸಂಖ್ಯೆ. . . . . . . . . . . . . . . . . . .

ಕಳುಹಿಸಿದ ಹಣವೆಷ್ಟು . . . . . . . . . . . . . . . . . .

**ಗೆಳೆಯರ ತಂಡದ ಸದಸ್ಯರಾಗುವವರು ಅಂತರಂಗದ ಕೆಳಗಿನ ಕೂಪನಿನಲ್ಲಿ ಬರೆಯಬೇಕು.**

## ಗೆಳೆಯರ ತಂಡದ ಸದಸ್ಯತನದ ಪತ್ರ.

ನಾನು 'ಗೆಳೆಯರ ತಂಡ'ಕ್ಕೆ ಸೇರಲಿಚ್ಛಿಸುತ್ತೇನೆ. ಆ ಬಗ್ಗೆ ಸದಸ್ಯತನದ ಆರು ತಿಂಗಳ ವರ್ಗಣಿಯಾದ ನಾಲ್ಕಾಣೆಯನ್ನು ಕಳುಹಿಸಿರುತ್ತೇನೆ.

ಹೆಸರು. . . . . . . . . . . . . . . . . . . . . . .

ವಿಳಾಸ. . . . . . . . . . . . . . . . . . . . . . .

ಉದ್ಯೋಗ. . . . . . . . . . . . . . . . . . . . . .

ಸಹಿ. . . . . . . . . . . . . . . . . . . . . . . .

# ನಮ್ಮಲ್ಲಿ

## - ಕನ್ನಡ ಪುಸ್ತಕಗಳು -

| | | | |
|---|---|---|---|
| ಶಾಂತಿ ಪುರಾಣ . . | 3 | 0 | 0 |
| ಚಂದ್ರಗುಪ್ತ ಚಕ್ರವರ್ತಿ . | 1 | 0 | 0 |
| ಸರಸ್ವತೀ . . . (ಸಾಮಾಜಿಕ ನಾಟಕ) | 0 | 8 | 0 |
| ಒಂದೇ ತಿಂಗಳಲ್ಲಿ ಇಂಗ್ಲಿಷ್ . (ಇಂಗ್ಲಿಷ್ ಸ್ವಯಂಬೋಧಿನಿ) | 0 | 8 | 0 |
| ಸಾಮುದ್ರಿಕ ಶಾಸ್ತ್ರ . . | 0 | 8 | 0 |
| ಹೊಂದೊವಲ ಹಂಬಲು. . | 0 | 6 | 0 |
| ವೀರಭೂಮಿ (ಕತೆ) . . | 0 | 1 | 6 |
| ಗೀತೆಯ ಕೈಗನ್ನಡಿ . . | 0 | 4 | 0 |
| ಗೀತೆಯ ಮೂಲ . . (ಈಶಾವಾಸ್ಯೋಪನಿಷತ್ತಿನ ಭಾಷಾಂತರ) | 0 | 1 | 0 |
| ಸ್ತ್ರೀಪದ್ಯರತ್ನಾಕರ ಭಾಗ I | 0 | 1 | 0 |
| ಡಿ II | 0 | 1 | 0 |
| ಡಿ III | 0 | 1 | 0 |
| ಡಿ IV | 0 | 1 | 0 |
| ಪುರಂದರ ದಾಸರ ಪದ ಭಾಗ I | 0 | 4 | 0 |
| ಡಿ II | 0 | 4 | 0 |
| ಡಿ III | 0 | 4 | 0 |
| ಮಧುವನ . . . | 1 | 8 | 0 |
| ಧರ್ಮಸಂಕಟ (ಸಾಮಾಜಿಕ ನಾಟಕ) | 0 | 4 | 0 |
| Gouthama the Buddha | 0 | 8 | 0 |
| ಭಗವದ್ಗೀತೆ . . . | 0 | 2 | 0 |
| ಕುಕ್ಕುಟ ಪಂಚಾಂಗ . . | 0 | 1 | 0 |
| ಮಗ್ಗಿ . . . . | 0 | 1 | 6 |
| ತುಳುನಾಡ್ ತಿಲಕ ಪಂಚಾಂಗ . | 0 | 1 | 0 |
| ವೈಜಯಂತೀ ಪಂಚಾಂಗ . | 0 | 2 | 6 |
| ಜಯಪಾಂಡ್ಯ ವಿಜಯ . . | 0 | 2 | 0 |

## - ತುಳು ಪುಸ್ತಕಗಳು -

| | | | |
|---|---|---|---|
| ಕೃಷ್ಣಸಂಧಾನ (ಪ್ರಸಂಗ) . (ಕನ್ನಡ ಕೃಷ್ಣಸಂಧಾನವನ್ನೊಳಗೊಂಡಿದೆ.) | 0 | 8 | 0 |
| ಬಲೀಂದ್ರ (ಕತೆ) . . (ವಿಮರ್ಶಾತ್ಮಕ ಲೇಖನ) | 0 | 2 | 0 |
| ಅಳಿಯ ಸಂತಾನ ಕಟ್ಟ್‌ದ ಗುಟ್ಟು | 0 | 4 | 0 |
| ಕಾನಿಗೆ್ (ಪದ್ಯ) . . | 0 | 4 | 0 |
| ತುಳುವ್ಯಾಕರಣ . . | 0 | 8 | 0 |
| ಜನಮರ್ಲ್ (ನಾಟಕ) . . | 0 | 6 | 0 |
| ಮದ್‌ಮಾಳತ್ತ್ ಮದ್‌ಮಾಯಿ. (ಕತೆ) | 0 | 2 | 0 |
| ಬಂಗಾರ್‌ದಂಗಿದ ಕತೆ್ . . | 0 | 1 | 0 |
| ಪದ್ಯಮಾಲಿಕೆ್ . . | 0 | 1 | 0 |
| ಮಿತ್ಯನಾರಾಯಣ ಕತೆ್. . | 0 | 8 | 0 |
| ಸತೀ ಕಮಲೆ್ (ನಾವೆಲ್) . . | 0 | 6 | 0 |
| ಕನ್ಯೋಪದೇಶ . . . | 0 | 2 | 0 |
| ಕನ್ನಡಕೊ . . . | 0 | 0 | 6 |
| ವಾಲಿಸುಗ್ರೀವರ ಕಾಳಗ. . | 0 | 3 | 0 |
| ಬೊಬ್ಬರ್ಯೆ (ಪಾಡ್ದನ) . . | 0 | 2 | 0 |
| ತೊಡಕಿನಾರ್ ,, . . | 0 | 2 | 0 |
| ಮುಂಡತ್ತಾಯ ,, . . | 0 | 2 | 0 |
| ವಿಶ್ವರೂಪ ದರ್ಶನ . . (ಗೀತೆಯ II ನೇ ಅಧ್ಯಾಯದ ಪದ್ಯಾತ್ಮಕ ಭಾಷಾಂತರ) | 0 | 1 | 0 |
| ಭಗವದ್ಗೀತೆ . . | 0 | 5 | 6 |

## ತುಳುನಾಡ್ ಪ್ರೆಸ್, ಉಡುಪಿ.



# ನನ್ನ ತಾಯಿಯ ಮರಣ



ಬರೆದವರು: ಶ್ರೀ. ಯನ್. ಶ್ರೀಪಾದರಾವ್, ಎಲ್. ಎಂ. ಪಿ.
ಮದ್ರಾಸ್ ಸರಕಾರದ ೧೯೧೦ರ ಸ್ವರ್ಣ ಪದಕದಾರರು.

ನಾನು ಶ್ವಾಸಕೋಶಗಳ ವಿಷಯದ ವರೆಗೆ ಅಂತರಂಗದಲ್ಲಿ ಬರೆದು,ರಕ್ತ ಮತ್ತು ಅದರ ಚಲಾವಣೆ(Blood and its circulation)ಎಂಬ ವಿಶಯು ಗುರುವಾರ ಅಮವಾಸ್ಯೆಆಗೋಸ್ತು ತಾ ೨೫ರ ಮಧ್ಯಾಹ್ನ ೨ ಘಂಟೆಗೆ ಬರಿಯುತ್ತಿದ್ದೆ-ಆಗ ನನ್ನ ತಾಯಿಯ ಅನುಪಾನ ನೋಡಿಕೊಂಡಿರುವ ಹೆಂಗಸು ಬಂದು, 'ತಾಯಿಯು ಮಾತಾಡುವದಿಲ್ಲಾ' ಅಂದಳು. ಯಾವಾಗಲೂ ಮಜ್ಜಿಗೆ ಸಾಕು, ಯಾ, ಬೇಕು ಅನ್ನುವವರು ಈ ದಿನ ಮೊದಲು ಬಾಯಿಗೆ ಹಾಕಿದಾಗ ಸುಮಾರು ಅರ್ಧ ಕುಡ್ತೆ ಕುಡಿದರು. ತರುವಾಯ 'ಸಾಕು ಬೇಕು' ಎಂಬ ಮಾತೇ ಇಲ್ಲ- ''ರಾಮಾ'' ಎಂಬ ಎರಡೇ ಅಕ್ಷರಗಳು ಆಖ್ಯೆರು' ಅಂದಳು. ನಾನು ಹೋಗಿ ನೋಡಿದರೆ ಶ್ವಾಸವೂ ನಾಡಿಯೂ ಇಲ್ಲ. ''ಸ್ತೆತೆಸ್ಕೋಪ''ನ್ನು ಗುಂಡಿ ಹೊಡಿಯುವಲ್ಲಿ ಎದೆಗೆ ಇಟ್ಟು ಕೇಳಿದಲ್ಲಿ ಗುಂಡಿ ಹೊಡೆಯುವ ಶಬ್ದ (Heart sounds) ಬಹಳ ವೇಗವಾಗಿಯೂ ಬಲಹೀನವಾದಂತೆ ಹಗುರವಾಗಿಯೂ ಕೇಳಿಸಿದವು. ಕೂಡಲೇ ನಾನೂ ಆ ಹೆಂಗಸೂ ಕೂಡಿ ತಲೆಕಾಲು ಬದಿಯಲ್ಲಿ ಹಿಡಿದು ಮಧ್ಯದ ಕೋಣೆಯಲ್ಲಿ ಮಲಗಿದ್ದ ತಾಯಿಯನ್ನು ಚಾವಡಿಯಲ್ಲಿ ದರ್ಭಾಸನದ ಮೇಲೆ ಮಲಗಿಸಲಿಕ್ಕೆ ಮೆಟ್ಟಲು ದಾಟಿದ ಕೂಡಲೆ ''ವ್ರೊಂ್ಯಂಕ್'' ಎಂಬ ಒಂದು ಶಬ್ದವು ತಾಯಿಯ ಬಾಯಿಂದ ಹೊರಟಂತೆ ಕೇಳಿಸಿತು. ಹಾಗೆಯೇ ಮಲಗಿಸಿ ಪುನಹ ಗುಂಡಿ ಹೊಡಿಯುತ್ತದೋ ಎಂತ ಸ್ತೆತೆಸ್ಕೋಪ ಇಟ್ಟು ನೋಡಿದೆ. ಏನೂ ಶಬ್ದ ಕೇಳಿಸಲಿಲ್ಲವಾದ್ದರಿಂದ ಶಿವಾಧೀನವಾಗಿದ್ದಾರೆಂದು ನೆನಸಿ ಭಟ್ರಿಗೆ ಹೇಳಿ, ಚಿಟ್ಪಾಡಿಯ ರುದ್ರಭೂಮಿಗೆ ಶವವನ್ನು ಶಾಸ್ತ್ರೋಕ್ತ ಕ್ರಮದಂತೆ ಅಗ್ನಿಗೆ ದಾನ ಮಾಡುವ ಏರ್ಪಾಡು ಮಾಡಿ, ಬೆಂಗ್ಳೂರಲ್ಲಿರುವ ನನ್ನ ಅಣ್ಣ ಪಾಂಡುರಂಗರಾಯರಿಗೆ ತಂತಿ ಮೂಲಕವೂ ಬೇರೆ ಸಂಬಂಧಿಕರಿಗೆ ಪತ್ರಮೂಲಕವೂ ತಾಯಿಯು ತನ್ನ ೮೪ನೇ ವರ್ಷದಲ್ಲಿ ಶಿವಾಧೀನವಾದ ಸಂಗತಿಯನ್ನು ತಿಳಿಸಿದ್ದಾಯಿತು. ಭಟ್ರು ದಾನ ವಗ್ಯೆರೆ ಮಾಡಿಸಿ, ಮುಖ್ಯವಾಗಿ ಬ್ರಹ್ಮದಂಡವೆಂದು ಬಹಳ ಹಣದಂಡ ಮಾಡಿಸಿದರು. ಈ ಬ್ರಹ್ಮದಂಡವೆಂಬುದು ಹುಟ್ಟಿದ ಪಾಪ ವಿಮೋಚನೆಗಾಗಿ ಪ್ರಾಯಶ್ಚಿತ್ತವೆಂದು ನಂಬುತ್ತೇನೆ. ಆದರೆ ತಾಯಿ ಹುಟ್ಟಿದ ತಪ್ಪಿಗೋ ಏನೆಂಬುದು ಸರಿಯಾಗಿ ತಿಳಿಯಲಿಲ್ಲ- ಹೇಗೂ ಹುಟ್ಟಿಧಾರಭ್ಯ ನಾಮಕರಣ ಚೌಲು ಉಪನಯನ, ಮದುವೆ, ಶೋಭನಪ್ರಸ್ತ ಎಂತ ಭಟ್ರು ಇಲ್ಲದೆ ಆಗೋದಿಲ್ಲ-ಸತ್ತ ಮೇಲೆ ಕೂಡಾ ಕ್ರಿಯೆ, ಬೊಜ್ಜ, ವೈಕುಂಠಸಮಾರಾಧನೆ, ಮಾಸಿಕ, ವರ್ಷಾಂತಿಕ ಎಂತ ಹೇಳಿ, ಅದರಲ್ಲಿ ಸ್ವಲ್ಪ ನಂಬಿಕೆ ಇದ್ದವರಿಗೆ ಬಹಳ ತರದ ಕಾರ್ಯಕ್ರಮಗಳನ್ನು ಮಾಡುವದುಂಟು– ಈ ಕ್ರಿಯೆಯ ಕ್ರಮವನ್ನು ಸರಿಯಾಗಿ ತಿಳಿದರೆ ಈ ದಿವಸಗಳಲ್ಲಿ ಮಾಡುವ ಪಿಂಡದ ಆಕೃತಿಯು ಪ್ರತಿ ದಿವಸವೂ ಒಂದೊಂದು ದಿವಸಕ್ಕೆ ಸರಿಯಾಗಿ ಪರಮಾತ್ಮನ ಮತ್ಸ್ಯ, ಕೂರ್ಮ, ವರಾಹ, ನಾರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬೌದ್ಧ, ಕಲ್ಕ್ಯ ಅವತಾರಗಳ ವರ್ಣನೆಗೆ ಸರಿಯಾಗಿ ಇರುತ್ತದೆ. ಹೀಗೆ ಹತ್ತು ದಿವಸ ಪ್ರೇತಪಿಂಡ ಪ್ರದಾನ ಆದ ಮೇಲೆ ಹನ್ನೊಂದನೇ ದಿವಸ ಪಿತೃಲೋಕಕ್ಕೆ ಸಪಿಂಡ ಅಂದರೆ ಮೂರು ತಲೆ, ಅಂದರೆ ನನ್ನ ತಾಯಿ, ತಾಯಿಯ ಅತ್ತೆ, ತಾಯಿಯ ಅತ್ತೆಯ ಅತ್ತೆ ಈ ಮೂರು ಪಿಂಡಗಳನ್ನು ಜೇನು ಮತ್ತು ತುಪ್ಪ ಇಟ್ಟು ಹಾಗೆಯೇ ಅವರು ಪ್ರೇಮದಿಂದ ಪಿತೃಲೋಕದಲ್ಲಿ ಇರುವಂತೆ ಮನೋ, ವಾಯು, ಮಂತ್ರ, ತಂತ್ರಗಳಿಂದ ಸುಖ ರೂಪಿಯಾಗಿರುವಂತೆ ಮಾಡುವದು ಒಳ್ಳೇ ಪುತ್ರನ ಕರ್ತವ್ಯವು. ಹನ್ನೆರಡನೇ ದಿವಸ ಬೊಜ್ಜ ಯಾ ಚಾಜ್ಯ ಅಂದರೆ ಪಿತೃಭೋಜನ– ಈ ಕೆಲಸವು ಪುತ್ರನಿಂದಲೇ ಆಗಬೇಕಂತ ಹಿಂದು ಧರ್ಮ ಶಾಸ್ತ್ರಗಳಲ್ಲಿ ಇರುವದರಿಂದ ಪುತ್ರರಿಲ್ಲದಿದ್ದವರು ದತ್ತಪುತ್ರನನ್ನು ಸ್ವೀಕಾರ ಮಾಡಿಕೊಳ್ಳಬೇಕು– ಹಾಗಲ್ಲದಿದ್ದರೆ ದಾಯಾದಿಗಳಲ್ಲಿರುವ ಗಂಡುಮಕ್ಕಳು ಮಾತ್ರ ಈ ಕೆಲಸವನ್ನು ಅಂದರೆ ಪ್ರೇತ ಸಂಸ್ಕಾರ ಮಾಡುವ ಹಕ್ಕುದಾರರು- ಅಲ್ಲದೆ ಹೆಣ್ಣು ಮಕ್ಕಳಿದ್ದರೂ ಅವರಿಗಿಲ್ಲ ಈ ಅಧಿಕಾರ.* ಹಿಂದುಗಳು ಇಹಲೋಕದ ಆ ಶಾಶ್ವತ ಸುಖಕ್ಕೆ ಹೆಚ್ಚಿನ ಲಕ್ಷ್ಯಕೊಡದೆ ಪರಮಾತ್ಮನ ನಿತ್ಯ ಸುಖಕ್ಕೇನೇ ಅವರ ತನುಮನ ಧನವನ್ನು ಅರ್ಪಿಸಿ, ಗೌತಮ ಬುದ್ಧನಾಗಲಿ ಮಹಮ್ಮದೀಯರಾಗಲೀ, ಏಸುಕ್ರಿಸ್ತರಾಗಲೀ, ಜೊರೊಸ್ಟ್ರೀಯರಾಗಲೀ ಯಾರಾದರೂ ಬೈರಾಗಿ, ಫಕೀರ, ಪಾದ್ರಿ, ಸನ್ಯಾಸಿಯೆಂತ ಹೆಂಡ್ತಿಮಕ್ಕಳಿಲ್ಲದೆ ಇಹದ ಸುಖವನ್ನು ಅಲಕ್ಷಿಸಿ ಪರಮಾತ್ಮನ ನಿತ್ಯಸುಖವನ್ನು ಕೊಡುವ ಮಾರ್ಗಹಿಡಿದು ತೋರಿಸುತ್ತಾರೆಂದರೆ ಅವರನ್ನು, ಅರಸನಿಗೂ ವಿಗ್ರಹದ ದೇವರಿಗೂ ಕೊಡುವ ಮರ್ಯಾದೆಗಿಂತ ಹೆಚ್ಚು ಮರ್ಯಾದೆ ಕೊಟ್ಟು ಬರಮಾಡಿಕೊಂಡಿದ್ದರು. ಇವರಲ್ಲಿ ಹಲವು ಕಪಟ ಬೈರಾಗಿ, ಫಕೀರರು, ಪಾದ್ರಿಗಳು, ಸನ್ಯಾಸಿಗಳು ಇದ್ದು ಈ ಹಿಂದುಸ್ಥಾನವು ಎಲ್ಲಾ ಮತದವರಿಗೂ ಎಲ್ಲಾ ಜನಾಂಗಗಳಿಗೂ ಆಶ್ರಯವನ್ನು ಕೊಟ್ಟು, ಎಲ್ಲಾ ಊರಿನಲ್ಲಿ ಬೇಡವೆಂತ ಹೇಳುವ ಯಹೂದಿಯರಿಗೆ ಸಹಾ ಈ ಭರತ ಮಾತೆಯು ಅನ್ನಪಾನ ನೀಡುತ್ತಾಳೆ. ಶ್ರಾದ್ಧದ ಕಾಗೆ, ದನ, ಬ್ರಾಹ್ಮಣ ಅಂದರೆ, ಪಕ್ಷಿ ಮೃಗ ಮನುಷ್ಯ ಎಲ್ಲರಿಗೂ ಉಣ್ಣಿಸಿ ತೃಪ್ತಿಯಾದ ಮೇಲೆ ಶ್ರಾದ್ಧ ಮಾಡಿದವ ಉಣ್ಣಬೇಕು-ಇದೇ ಮುಖ್ಯ ಧರ್ಮ. ಸತ್ತ ಮೇಲೆ ಸಹಾ ಕೆಲವರು ಕೊಲೆ ಮುಂತಾದ ಕ್ರೂರ ಯಾ ಅಕಸ್ಮಾತ ಮರಣವಾದವರು ಪ್ರೇತರೂಪದಲ್ಲೇ ಇದ್ದು, ಸೂಕ್ಷ್ಮಶರೀರದಲ್ಲಿ ಈ ಕರ್ಮಭೂಮಿಯಲ್ಲೆ ಪೂರ್ಣ ಆಯುಷ್ಯವಾಗುವ ತನಕ ಇರುತ್ತಾರೆಂಬುದಕ್ಕೆ ರುಜುವಾತಾಗಿ ಟ್ಯಾಮ್ಸಆಫ್ ಇಂಡಿಯಾ ಪತ್ರಿಕೆಯ ನೂರನೇ ವರ್ಷದ ೧೯೩೯ನೇ ಇಸವಿಯ ವರ್ಷಾವಧಿ ವಾರ್ತೆಯಲ್ಲಿ- (Centenary annual times of India 1939) 'ಸಿರೂರಿನ ಹಳೆ

ಗೋರಿಗಳು' ಬರೆದವರು. ಸಿ. ವಿ. ಕಿಂ ಕ್ಯಾಡ್. ಸಿ. ವಿ. ಒ. ಐ ಸಿ. ಸ್. (Retd) Grave yards of Seirur. By C. V. kencaid. C. V. O. I. C. S. (Retd) ಎಂಬ ಸಮುಸ್ಯೆಯನ್ನು ನೋಡಿದ್ದಲ್ಲಿ ಸಮಾಧಾನವಾಗಬಹುದು.

ಸಿರೂರೆಂಬುದು ಪೂನೆಯಿಂದ ಸುಮಾರು ೪೦ ಮೈಲು ದೂರ ವಿರುತ್ತದೆ. ಅಲ್ಲಿ ೧೮೧೭ನೇ ಇಸ್ವಿಯಿಂದ ಪಟ್ಲಾಮು ಇತ್ತು. ಅಲ್ಲಿ ಪಟ್ಲಾಮಿನ ದಳನಾಯಕರ ಗೋರಿಗಳಿವೆ—ಅವುಗಳ ಪೈಕಿ ಒಂದು ಗೋರಿಯು ನಡುವಿನಲ್ಲಿ ಇದ್ದದ್ದು ಎಲ್ಲಾ ಗೋರಿಗಳಲ್ಲಿ ದೊಡ್ಡದು. ಈ ದೊಡ್ಡ ಗೋರಿಗೆ ಎಲ್ಲಾ ಸಿಪಾಯಿಯರೂ ಸಲಾಂ ಮಾಡುತ್ತಿದ್ದಾರೆ.ಯಾಕೆ ಹೀಗೆ ಸಲಾಂ ಮಾಡುತ್ತಾರಾಗಿ ಕೆಪ್ಟನ್‌ಜೋನ್ಸನ್ ಯೆಂಬ ದಳಪತಿಯನ್ನು ಕೇಳಿದೆ. ಸಿಪಾಯರು ಗೋರಿಗಲ್ಲ, ಹಳೆ ದಳಪತಿ ಕೊಲಿಯಿಂದ ಮೃತಪಟ್ಟ ಕರ್ನಲ್ ಹಚ್ಚಿಂಗ್ಸ್ ದೊರೆಗೆ ಸಲಾಂ ಮಾಡುತ್ತಾರೆ ಅಂದರು. ಈ ಹಚ್ಚಿಂಗ್ಸ್ ಎಂಬವರ ಗೋರಿಯು ಅದೇ ದೊಡ್ಡದು, ಮತ್ತು ನಡುವಿನಲ್ಲಿದೆ. ಈ ಗೋರಿಯ ಮೇಲೆ ಮೃತಪಟ್ಟ ಯಾ ಕೊಲ್ಲಲ್ಪಟ್ಟ ಕರ್ನಲ್ ಹಚ್ಚಿಂಗ್ಸ್ ದೊರೆಯೂ ಅವರ ಶಿಂಡೆ ಕುಟುಂಬದವರ ಹಿಂದು ವಿಧವೆ ಹೆಂಡತಿಯು ಕೂಡಾ ಕೂತುಕೊಂಡದನ್ನು ಎಲ್ಲರೂ (ನಾನು ಸಹಾ) ನೋಡಿದ್ದೇವೆ–ಇದು ನಮ್ಮ ಮನೋಭಾವ ಚಿತ್ರವೋ ಹೇಳಲಸಾಧ್ಯವು. ಈ ವಿಷಯು ಹೆಚ್ಚಿನ ವಿಚಾರ ತಿಳಿಯ ಬೇಕಾದರೆ ಪೂನೆಯಲ್ಲಿರುವ ರಿಸಿಲ್ದಾರ್ ಮೇಜರ್ ಶಿಂಡೆಯ೦ಬವರಿಂದ ತಿಳಿಯಬಹುದೆಂದರು. ಜೋನ್ಸನ್ ಕೆಪ್ಟನ್—ಹೇಳಿದ ಕೇಳಿದ, ಶಿಂಡೆ ಕುಟುಂಬದ ಓರ್ವ ವಿಧವೆ ತನ್ನ ಗಂಡನ ಶವದ ಸಂಗಡಲೇ ಸಹಗಮನಮಾಡುವಾಗ ಅವಳು ಆಗ ಕೆಪ್ಟನ್‌ಹಚ್ಚಿಂಗ್ಸ್ ದೊರೆಯು ಪಟ್ಲಾಮು ಸಿಪಾಯಿಗಳೊಡನೆ ಆ ಹಾದಿಯಲ್ಲಿ ಹೋಗುವದನ್ನು ನೋಡಿ, ಅವರನ್ನು ತನ್ನನ್ನುರಕ್ಷಿಸಬೇಕಾಗಿ ಕೂಗಿಕೇಳಿದ ಪ್ರಕಾರ ಅವಳನ್ನು ಕರಕೊಂಡುಹೋಗಿಮದುವೆ ಮಾಡಿಕೊಂಡ ಮೇಲೆ ತಮ್ಮ ಶಿಂಡೆ ಕುಟುಂಬಕ್ಕೆ ಹೀಗೆ ಪದ್ಧತಿಗೆ ವಿರೋಧವಾಗಿ ಅಪಮಾನ ಮಾಡಿದ್ದಕ್ಕಾಗಿ ಶಿಂಡೆಗಳು ಅವರನ್ನು ಮೋಸದಿಂದ ಬೇಟೆಗೆ ಹೋಗುವಾಗ ಕೊಲ್ಲಿಸಿದರು. ಎಂತ ಕಥಾ ವಿಸ್ತಾರವನ್ನು ಕಿಂಕ್ಯಾಡ ಧೊರೆಯು ತಿಳಕೊಂಡು ಹೀಗೆಸತ್ತವರನ್ನು ನೋಡಲಿಕ್ಕೆ ಉಂಟೋ ಎಂಬುದನ್ನು ಪರಿಕ್ಷಿಸುವ ಬಗ್ಗೆ ಶಿಂಡೆಯವರ ಜತೆಗೆ ಪೌರ್ಣಮಿಯ ಮಧ್ಯರಾತ್ರಿಗೆ ಆ ಗೋರಿಯ ಬಳಿಗೆ ಹೋಗಿ ಭಾವಚಿತ್ರ–(Photograph)ತೆಗೆದು ನೋಡಿದಲ್ಲಿಬಂದ ಕರ್ನಲ್ ಹಚ್ಚಿಂಗ್ಸ್‌ನಂತಹ ಇಂಗ್ಲಿಷ್ ದೊರೆಯು ಮತ್ತು ಹೆಂಡತಿಯ ಭಾವಚಿತ್ರಗಳನ್ನು ತಾನು ಇನ್ನೂ ಭದ್ರವಾಗಿ ಇಟ್ಟಿದ್ದೇನೆಂದು ಕಿಂಕ್ಯಾಡ ದೊರೆಯು ಬರೆದಿದ್ದಾರೆ-ಇಂಗ್ಲಿಷ್ ಭಾಷೆಯಲ್ಲಿ ಅವರು ನಿರ್ಧಾರವಾಗಿ ನೋಡಿ ನಂಬಿಕೆಯಿಂದ ಬರೆದದ್ದು ಹೀಗಿದೆ.

There, in the photograph, did seem to be something that might have been the late Mrs. Hutchings (A widow of the Shinde family rescued from being burnt alive on the funeral pyre of her dead husband (i. e. sati) and carried away and married by the, then captain Hutchings according to the wishes of the young widow) About the colonel himself there conld be no doubt whatever and I still treasure the photograph of the grave yard donbly strange because of its weird appearance by moonlight and the uncanny figure of the Englishman sitting on the plinth of the central monument.

ಇದರಿಂದ ತಿಳಿಯಬೇಕಾದದ್ದು ಏನು? ಈ ಕರ್ಮಭೂಮಿಗೆ ಬಂದಿರುವ ಈ ದೇಹವು ನಮ್ಮ ಗೋಚರ ದೃಷ್ಟಿಗೆ ಅಂದರೆ ಕಣ್ಣುಗಳಿಗೆ ಕಾಣುವಂಥಾ ಸ್ಥೂಲದೇಹ ಮಾತ್ರವಲ್ಲ, ಸೂಕ್ಷ್ಮ ದೇಹ ಸಹಾ (astral body) ಉಂಟು, ಮತ್ತು ಅದರ ಭಾವಚಿತ್ರ ಸಹಾ ಸತ್ತ ಮೇಲೆ ತೆಗಿಯಲಿಕ್ಕೆ ಸಾಧ್ಯಉಂಟು ಎಂಬದು ನಿಜವೆಂದು ಧೃಡವಾಗುತ್ತದೆ. ಈ ಸೂಕ್ಷ್ಮ ದೇಹ ಸಹಾ ಕಾಲಾಂತರದಲ್ಲಿ ನಾಶಹೊಂದಿ, ಆತ್ಮನು ಹೊಸಜನ್ಮವನ್ನೇ ತಕೊಂಡು ಕರ್ಮಭೂಮಿಗೆ ಬರುವುದು, ಅಥವಾ ಪರಮಾತ್ಮನಲ್ಲಿ ಐಕ್ಯವಾಗಿ ಸಾಯುಜ್ಯಮುಕ್ತಿಯನ್ನು ಹೊಂದಿ ಜನ್ಮಮರಣದ ಭವಭಾಧೆಯಿಂದ ಪುನೀತನಾಗುವದು—ಇಲ್ಲವಾದರೆ ಪಿತೃಲೋಕದಲ್ಲಿ ಈ ಸೂಕ್ಷ್ಮ ದೇಹವನ್ನು ತಾಳಿಕೊಂಡು, ಕೆಲವು ಸಾರಿ ಕರ್ಮಭೂಮಿಗೆ ಕೂಡಾ ಬಂದು, ಇರುವದು.-ಈ ಕರ್ಮ ಭೂಮಿಗೆ ಬರಲಿಕ್ಕೆ ಕಾಂಕ್ಷೆ ಅಥವಾ ಪೂರ್ವಸದ ಇಚ್ಛೆಯೇ ಕಾರಣವಾಗಿರುತ್ತದೆ. ಆದ್ದರಿಂದಲೇ ಸಾಯುಜ್ಯವಾಗಲಾದರೂ ಪರಮಾತ್ಮನಲ್ಲೇ ಇರುವ ನಿತ್ಯ ಸುಖವನ್ನು ಬಯಿಸಿ (ಆತ್ಮನು ಎಲ್ಲಾ ಭೋಗಗಳಿಗೆ ಕಾರಣವಾದ ದೇಹವನ್ನೇ ಬಿಟ್ಟು ಹೋಗುವಾಗ ಆದರೂ) ಆ ಪರಮಾತ್ಮನನ್ನೇ ಧ್ಯಾನಿಸಿ ನಾಲಿಗೆಯು ಪರಮಾತ್ಮನ ಸ್ಮರಣೆಯನ್ನು ಮಾಡಿ ಪ್ರಾಣ ವಾಯು ಹೋದವರಿಗೆ ಸಾಯುಜ್ಯಮುಕ್ತಿ ದೊರಕುವದಾಗಿ ಶಾಸ್ತ್ರ, ಪುರಾಣ, ಗೀತೆ, ಶ್ರುತಿ, ಸ್ಮೃತಿಗಳಲ್ಲಿ ಭೋಧಿಸಿದ ಪ್ರಕಾರ ಹಿಂದುಗಳು ಇದಕ್ಕೆ ಅನುಕೂಲವಾಗುವಂತೆ ಮಕ್ಕಳಿಗೆ ದೇವರ ಹೆಸರಿಡುವರು, ದೇವರ ಹೆಸರೇ ಮೊದಲು ಬರಿಸುವದು, ಹಬ್ಬಗಳಂತ ವಿಶೇಷ ಕಟ್ಲೆಯಲ್ಲಿ ಮತ್ತು ಯಾವಾಗಲೂ ಆಹಾರವನ್ನು ದೇವರಿಗೆ ಸಮರ್ಪಣೆ ಯಾ ನೈವೇದ್ಯಮಾಡಿ ಪ್ರಸಾದವಾಗಿ ದೇವರ ಹೆಸರಿನಲ್ಲಿ ಆಹಾರವನ್ನು ಸ್ವೀಕರಿಸುವದು, ಮುಂಜಿ, ವಗೈರೆ ಸತ್ಕರ್ಮಗಳು ಮಾಡುವಾಗ ಪರಮಾತ್ಮನ ಸಹಾಯವನ್ನೇ ಬೇಡಿ ಪ್ರತಿ ಕಾರ್ಯದಲ್ಲಿಯೂ ಈ ದೇಹದ ಉಪಚಾರ ಸುಖವು ಅನಿತ್ಯವಾದುದ್ದೆಂದು ತಿಳಿದು, ಪರಮಾತ್ಮನಲ್ಲೇ ಇರುವ ನಿತ್ಯಸುಖವನ್ನೇ ಬಯಸಿ ಅದಕ್ಕೆ ಸರಿಯಾಗಿ ಧರ್ಮ, ಕರ್ಮ, ಸಾಧನಗಳನ್ನು ಹಿಂದುಗಳು ಸೂಚಿಸಿ ಅದಕ್ಕೆ ಸರಿಯಾಗಿ ಆಚರಣೆ ಮಾಡಿ ನಡಕೊಂಡರೆ ಇಹಪರದಲ್ಲಿಯೂ ಸುಖ ಉಂಟೆಂಬುದು ತಿಳಯತಕ್ಕದ್ದು.-ಎಂದು ಬೋಧಿಸಿರುತ್ತಾರೆ-ಹೀಗೆಯೇ ಬೇರೆ ಎಲ್ಲಾ ಮತಗಳ ಸಾರಾಂಶವು ಆಯಾಯ ದೇಶದ ಅನುಕೂಲತೆಗಳಿಗೆ ಸರಿಯಾಗಿ ನಿರೂಪಣೆ ಮಾಡಿದ್ದಾರಾಗಿ ನಂಬುತ್ತೇವೆ.

श्री प्रसाद ಶ್ರೀ ಪ್ರಸಾದ SRI PRASADA

ಸಮಗ್ರ ಭಾರತದಲ್ಲಿ ಅನೇಕ ವರ್ಷಗಳಿಂದ ಸಂಚರಿಸುತ್ತಲಿರುವ
ಮಂತ್ರವಿದ್ಯೆಯಲ್ಲಿ ಪಾರಂಗತರಾದ ತನ್ನ ಮಂತ್ರಶಕ್ತಿಯಿಂದ
ಅನೇಕ ಜನರಿಗೆ ಪ್ರಯೋಜನವನ್ನುಂಟುಮಾಡಿದ
ಯೋಗಿ ಮಹಾಶಯರೊಬ್ಬರ

# ಮಹಾಮಂತ್ರಶಕ್ತಿಯ ಪ್ರಸಾದ

ಈ ಪ್ರಸಾದಗಳ ಸೇವನೆಯಿಂದಲೂ, ಧಾರಣೆಯಿಂದಲೂ, ಪ್ರಯೋಗದಿಂದಲೂ ಅನೇಕರು ಅನೇಕ ವಿಧಗಳಿಂದ ಪ್ರಯೋಜನವನ್ನು ಹೊಂದಿರುವರು.



ಮುಖತಃ ಭೇಟಿಯನ್ನು ಇಟ್ಟುಕೊಳ್ಳಲಾಗುವುದಿಲ್ಲ.

**ಈ ಪ್ರಸಾದದಿಂದ**

*Personal interviews are prohibited.*



ಪರೀಕ್ಷೆಯಲ್ಲಿ ಪಾಸಾಗುವದು, ಶತ್ರುಗಳನ್ನು ಸ್ವಾಧೀನಪಡಿಸುವದು, ವ್ಯಾಪಾರದಲ್ಲಿ ಅಭಿವೃದ್ಧಿ ಹೊಂದುವದು, ಮುಂತಾದ ಯಾವತ್ತು ಅಭೀಷ್ಟಗಳನ್ನು ಸಾಧಿಸಬಹುದು.

**ಒಂದು ತಿಂಗಳು ಉಪಯೋಗಿಸುವ ಪ್ರಸಾದಕ್ಕೆ ರೂಪಾಯಿ ಒಂದು.**

**ವಿಶೇಷತರದ ಪ್ರಸಾದಕ್ಕೆ ರೂಪಾಯಿ ಐದು.**

**ಪ್ರಸಾದ ಬೇಕಾದವರು** ತಮ್ಮ ನಕ್ಷತ್ರ, ಯಾ ಜನನ ಸಮಯವನ್ನೂ ತಾರೀಕನ್ನೂ ತಿಳಿಸಬೇಕು. ಅದು ಗೊತ್ತಿಲ್ಲದಿದ್ದರೆ ಕಾಗದಬರೆಯುವ ಸ್ಥಳ, ಸಮಯಗಳನ್ನೂ ನಿರ್ದೇಶಿಸಬೇಕು.

**ವಿ. ಪಿ. ಕ್ರಮವಿಲ್ಲ**—ಹಣವನ್ನು ಮುಂಗಡವಾಗಿಯೇ ಕಳುಹಿಸಬೇಕು. ಹಣವನ್ನು ಕಳುಹಿಸದೆ ಬರುವ ಕಾಗದಗಳಿಗೆ ನಿಗಾ ಕೊಡಲಾರದು.

**ಪತ್ರವ್ಯವಹಾರ:**—ಇಂಗ್ಲಿಷ್, ಸಂಸ್ಕೃತ, ಯಾ ಕನ್ನಡ ಭಾಷೆಯಲ್ಲಿ ಮಾಡಬಹುದು.
ಎಲ್ಲ ಪತ್ರಗಳು ಗುಪ್ತವಾಗಿರಿಸಲಾಗುತ್ತವೆ.

C. C. No. 4.

**C/o. ANTARANGA, UDIPI.**

# ಅಂತರಂಗದ ಮೂರನೆಯ ಸ್ಪರ್ಧೆ.

ನಾಲ್ಕಾಣೆಗಳಿಗೆ

**25/-**

ರೂಪಾಯಿಗಳನ್ನು

ಪಡೆಯಿರಿ.

## ಪ್ರಥಮ ಬಹುಮಾನ:- ರೂಪಾಯಿ ೨೫. [ನಗದಿ.]

ದ್ವಿತೀಯ ಬಹುಮಾನ ರೂಪಾಯಿ ೧೫ (ಪುಸ್ತಕಗಳು.)

ತೃತೀಯ ಬಹುಮಾನ ರೂಪಾಯಿ ೧೦ (ಪುಸ್ತಕಗಳು.)

- ಈ ಸ್ಪರ್ಧೆಯ ಉತ್ತರವು ಅಂತರಂಗದ ಸಂಪಾದಕರ ಬಳಿ ಮೊಹರು ಮಾಡಿಡಲಾಗಿದೆ.
- ಆದಕ್ಕೆ ಪ್ರತಿ ಅಕ್ಷರವೂ ಸರಿಹೋಲುವ ಉತ್ತರಕ್ಕೆ ಪ್ರಥಮ ಬಹುಮಾನವೂ, ಒಂದು ಮತ್ತು ಎರಡು ತಪ್ಪಿರುವವುಗಳಿಗೆ ಎರಡು ಮತ್ತು ಮೂರನೆ ಬಹುಮಾನಗಳೂ ಕೊಡಲ್ಪಡುವುವು.

ಬಹುಮಾನ ಪುಸ್ತಕಗಳ ಪಟ್ಟಿಯನ್ನು ಉತ್ತರ ಪ್ರಕಟಿಸುವ ಸಂಚಿಕೆಯಲ್ಲಿಯೇ ಕೊಡಲಾಗುವುದು. ಆದರಲ್ಲಿ ಆರಿಸಿ ಯಾವುದನ್ನಾದರೂ ಪಡಕೊಳ್ಳಬಹುದು.

- ಬಹುಮಾನಕ್ಕೆ ಯೋಗ್ಯವಾದ ಉತ್ತರಗಳು ಒಂದಕ್ಕಿಂತ ಹೆಚ್ಚಾದಲ್ಲಿ ಮೇಲ್ಕಂಡ ಬಹುಮಾನಗಳು ಎಲ್ಲರಿಗೂ ಸರಿಸಮಾನವಾಗಿ ಹಂಚಲ್ಪಡುವುವು.
- ಬಹುಮಾನವನ್ನು ಹಂಚುವ ವಿಚಾರ ಸ್ಪರ್ಧೆಯ ಮೆನೇಜರರಿಗೆ ಸೇರಿದೆ. ಈ ವಿಚಾರದಲ್ಲಿ ಯಾವ ಪತ್ರವ್ಯವಹಾರಗಳಿಗೂ ಅವಕಾಶವಿಲ್ಲ.
- ಪ್ರತಿ ಉತ್ತರಕ್ಕೂ ಪ್ರವೇಶಧನ ನಾಲ್ಕಾಣೆ.

ಒಬ್ಬನು ಎಷ್ಟೂ ಉತ್ತರಗಳನ್ನು ಕಳುಹಿಸ ಬಹುದು. ಒಂದು ರೂಪಾಯಿಗೆ ಐದು ಉತ್ತರಗಳನ್ನು ಕಳುಹಿಸಬಹುದಾಗಿದೆ.

ಗೆಳೆಯರ ತಂಡದ ಸದಸ್ಯರು ಒಂದು ರೂಪಾಯಿಗೆ ಎಂಟು ಉತ್ತರಗಳನ್ನು ಕಳುಹಿಸಬಹುದು.

- ಪ್ರ[illegible]ಶ ಧನವನ್ನು ಪೋಸ್ಟಲ್ ಸ್ಟಾಂಪು, ಇಂಡಿಯ[illegible] ಪೋಸ್ಟಲ್ ಆರ್ಡರ್ ಅಥವಾ ಮನಿ ಆರ್ಡರ್ ಮೂಲ ರವಾನಿಸಬಹುದು.
- ಉತ್ತರವನ್ನು ಬರೆಯುವವರು ಫೆಬ್ರವರಿ ೧೨ರೊಳಗೆ ಬರೆದು ಕಳುಹಿಸಬೇಕು. (ಅಂದರೆ ನಮಗೆ ತಲಪಬೇಕು) ನಂತರ ಈ ಸ್ಪರ್ಧೆಗಾಗಿ ಕಳುಹಿಸುವ ಉತ್ತರಗಳನ್ನು ಸ್ವೀಕರಿಸುವುದಿಲ್ಲ.
- ಸರಿಯಾದ ಉತ್ತರವನ್ನು ಫೆಬ್ರವರಿ ೧೯ರ "ಅಂತರಂಗ"ದಲ್ಲಿ ಪ್ರಕಟಿಸಲಾಗುತ್ತದೆ.

**ಈ ಸ್ಪರ್ಧೆಯ ಉತ್ತರಗಳು ಅಂತರಂಗದ ಕೂಪನಿನಲ್ಲಿಯೇ ಬರೆಯಲ್ಪಡಬೇಕು.**
**ಈ ಕೂಪನುಗಳು ಜನವರಿ ತಿಂಗಳ ಸಂಚಿಕೆಗಳಲ್ಲಿ ಪ್ರಕಟಿಸಲ್ಪಡುತ್ತವೆ.**
**ಉತ್ತರ ಕೊಡುವವರು ತಮ್ಮ ಪೂರ್ಣ ವಿಳಾಸವನ್ನು ಬರೆಯತಕ್ಕದ್ದು.**

**ಮೆನೇಜರ್, ಅಂತರಂಗ ಸ್ಪರ್ಧೆ, ಉಡುಪಿ.**

Printed and published by P. Venkataramanacharya for and on behalf of SUPPLY AGENCY LTD., at Manipal Power Press, Udipi.

| | | | | | | |
|---|---|---|---|---|---|---|
| ೧ | ೨ | ೩ | ೪ | ■ | ೫ | ೬ |
| ೭ | ■ | ೮ | ■ | ■ | ■ | ೯ |
| ■ | ■ | ೧೦ | ೧೧ | ■ | ೧೨ | ೧೩ |
| ೧೪ | ■ | ೧೫ | ■ | ೧೬ | ■ | ೧೭ |
| ೧೮ | ೧೯ | ■ | ೨೦ | ೨೧ | ■ | ■ |
| ೨೨ | ■ | ■ | ■ | ೨೩ | ■ | ೨೪ |
| ೨೫ | ೨೬ | ■ | ೨೭ | ೨೮ | ೨೯ | ೩೦ |

**ಎಡದಿಂದ ಬಲಕ್ಕೆ:—**

೧ರಿಂದ ೪ ಆನೆಯ ಮುಖವುಳ್ಳ ದೇವರು.

೫ ,, ೬ ದೇವಲೋಕದ ನರ್ತಕಿಯೊಬ್ಬಳು.

೧೦ ,, ೧೧ ಇದನ್ನು ಪಡೆಯುವುದಕ್ಕಾಗಿ ಹೆಚ್ಚಿನವರು ತನು ಮನಗಳನ್ನು ಸವೆಯಿಸುತ್ತಾರೆ.

೧೨ ,, ೧೩ ಸುಂದರವಾದ ವಸ್ತುವನ್ನು ಕಂಡರೆ ಹೀಗೆ ಉದ್ಗಾರಮಾಡುತ್ತಾರೆ.

೧೮ ,, ೧೯ ರಾಮಾಯಣಕಾಲದ ಒಬ್ಬ ಕಪಿ.

೨೦ ,, ೨೧ ಭೂಮಿ.

೨೫ ,, ೨೬ ಶ್ರೀರಾಮನು ಇವನ ವಂಶದವನು.

೨೭ ,, ೩೦ ಕೂದಲಿನ ಬಣ್ಣವು ಇದಾಗಿರಬೇಕೆಂದು ಹಿಂದುಸ್ಥಾನದ ಸೌಂದರ್ಯೋಪಾಸಕರ ಅಭಿಪ್ರಾಯ.

---

**ಮೇಲಿನಿಂದ ಕೆಳಗೆ: —**

೧ರಿಂದ ೭ ಚಿತ್ತಿಟ್ಟು ಕೆಳಗಿರುವ ಭಾಗ.

೩ ,, ೧೫ ವಿಷ್ಣುವಿನ ಹೆಸರುಗಳಲ್ಲೊಂದು.

೬ ,, ೧೭ ಭಾಗಿಸುವ ಲೆಖ್ಖಕ್ಕೆ ಹೀಗೆನ್ನುತ್ತಾರೆ.

೧೨ ,, ೨೫ ಇವನು ಮೂಡಿದೊಡನೆಯೇ ಹಗಲಾಗುತ್ತದೆ.

೧೬ ,, ೨೮ ಸ್ವಲ್ಪ ತಲೆಸರಿಯಿಲ್ಲದವರಿಗೆ......ರೆಂದು ಕರೆಯುತ್ತಾರೆ.

೨೪ ,, ೩೦ .......ಬಂದ ಮೇಲೆ ಬದುಕಬಾರದೆಂದು ಯುವಕರಭಿಮತ.

---